# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

ಮನುಷ್ಯರು ಬದುಕು ಸಾಗಿಸಲಿಕ್ಕಾಗಿ ಏನೋ ಒಂದು ವೃತ್ತಿಯನ್ನು ಹಿಡಿಯಲೇ ಬೇಕಾಗುತ್ತದೆ. ಹೀಗೆಂದ ಮಾತ್ರಕ್ಕೆ ಎಲ್ಲರೂ ಎಲ್ಲ ವೃತ್ತಿಗಳನ್ನೂ ಮಾಡಲು ಸಾಧ್ಯವಾಗುವುದಿಲ್ಲ. ಒಬ್ಬರು ಒಂದು ವೃತ್ತಿಯಲ್ಲಿ ಚೆನ್ನಾಗಿ ಬಾಳಿದ ಮಾತ್ರಕ್ಕೆ ವಿವೇಚನೆಯಿಲ್ಲದೆ ಅದೇ ವೃತ್ತಿಯನ್ನು ತಾನೂ ಮಾಡಿಬಿಡುತ್ತೇನೆಂದುಕೊಂಡರೆ ನಷ್ಟಕ್ಕೆ ಬೀಳಬೇಕಾಗುತ್ತದೆ. ಈ ಸಂಚಿಕೆಯಲ್ಲಿರುವ "ಸ್ವಾರ್ಥ ಚಿಂತನೆ" ಎಂಬ ಕಥೆ ಈ ವಿಷಯವನ್ನು ಚೆನ್ನಾಗಿ ನಿರೂಪಿಸುತ್ತದೆ.

## ಅಮರವಾಣಿ

ಕರಾವಿವ ಶರೀರಸ್ಯ ನೇತ್ರಯೋರಿವ ಪಕ್ಷ್ಮಣಿ
ಅವಿಚಾರ್ಯ ಪ್ರಿಯಂ ಕುರ್ಯಾತ್ ತನ್ಮಿತ್ರಂ ಮಿತ್ರಮುಚ್ಯತೇ

ಕೈಗಳು ಶರೀರಕ್ಕೆ ಉಪಯೋಗವಾಗುವಂತೆ, ರೆಪ್ಪೆಗಳು ಕಣ್ಣುಗಳನ್ನು ಕಾಪಾಡುವಂತೆ, ಕಷ್ಟದ ಸಮಯದಲ್ಲಿ ಸ್ನೇಹಿತರು ಕೇಳದೆಯೇ ಸಹಾಯ ಮಾಡುವರು.

ಸಂಪುಟ : ೨೨ ಡಿಸೆಂಬರ್ '೮೬ ಸಂಚಿಕೆ : ೬

ಬಿಡಿ ಪ್ರತಿ ರೂ. ೨-೫೦ : : ವಾರ್ಷಿಕ ಚಂದಾ ರೂ. ೩೦-೦೦






# ಚಂದಮಾಮನ ಹರಟೆ



## ಉತ್ತಮ ಗೆಳೆಯ !

ನೇಪಿಲ್ಸ್‌ನಲ್ಲಿ ಪಠಾತ್ತಾಗಿ ಒಂದು ಮನೆಗೆ ಬೆಂಕಿ ಹಿಡಿಯಿತು. ಆ ಮನೆಯನ್ನು ಕಾಯುತ್ತಿದ್ದ ರಾಶೀ ಎಂಬ ಜರ್ಮನೀ ನಾಯಿ ತನ್ನ ಒಡತಿಯಾದ ಮೂರು ವಯಸ್ಸಿನ ಮಗುವನ್ನು ಕಾಪಾಡಲು ಬೆಂಕಿಯೊಳಗೆ ಹಾರಿ ಮಗುವಿನ ಅಂಗಿಯನ್ನೂ ಕಾಲನ್ನೂ ಹಿಡಿದುಕೊಂಡು ಹೊರಗೆ ಎಳೆದು ತಂದಿತು. ಬೆಂಕಿಯಲ್ಲಿ ಸಿಕ್ಕಿಕೊಂಡ ಮತ್ತೆ ಕೆಲವರನ್ನು ರಕ್ಷಿಸುವ ಪ್ರಯತ್ನದಲ್ಲಿ ಬೆಂಕಿಗೇ ಆಹುತಿಯಾಯಿತು ಆ ನಾಯಿ !

## ನೆಪೋಲಿಯನ್ ನೌಕೆ

ನೈಲು ಯುದ್ಧಕ್ಕೆ ಒಂದು ತಿಂಗಳ ಮೊದಲು ೧೭೯೮ನೇ ಸಂವತ್ಸರದ ಜುಲೈ ೧ನೇ ತಾರೀಕಿನ ದಿನ ನೆಪೋಲಿಯನ್ ಬೋನಪಾರ್ಟಿಗೆ ಸೇರಿದ 'ಲೇಪೇಟ್ರಿಯಲ್' ಎಂಬ ನೌಕೆ ಈಜಿಪ್ಟ್ ಸಮುದ್ರ ತೀರದಲ್ಲಿ ಮುಳುಗಿ ಹೋಯಿತು. ೧೮೮ ವರ್ಷಗಳ ಅನಂತರ ಮುಳುಗಿ ಹೋದ ಆ ನೌಕೆಯನ್ನು ಫ್ರೆಂಚ್ ಸಂಶೋಧಕರು ಕಂಡುಹಿಡಿದರು !





## ಹೊಸ ಟೆಲಿಫೋನ್

ಕ್ಷಣ ಮಾತ್ರದಲ್ಲಿ ಫೋಟೋ ಹಿಡಿದು ಮತ್ತೊಬ್ಬರಿಗೆ ಕಳುಹಿಸುವ ಹೊಚ್ಚ ಹೊಸ ಟೆಲಿಫೋನ್ ಇತ್ತೀಚೆಗೆ ಕಂಡುಹಿಡಿದು ತಯಾರಿಸಲ್ಪಟ್ಟಿದೆ !

**ಪುರಾಣ ಗಾಥಾವಳಿ :**

# ಚೋಳರಾಜ, ವಿಷ್ಣುದಾಸ

**ಕಾಂ**ಚೀಪುರವನ್ನು ಪರಿಪಾಲಿಸಿದ ಚೋಳರಾಜನು ದೊಡ್ಡ ವಿಷ್ಣು ಭಕ್ತನು. ಒಂದು ಪರ್ವದಿನದಲ್ಲಿ ಆ ರಾಜನು ರತ್ನಹಾರ, ಸ್ವರ್ಣ ಪುಷ್ಪಗಳೊಂದಿಗೆ ವಿಷ್ಣು ಮಂದಿರಕ್ಕೆ ಹೋದನು. ಅದಕ್ಕೆ ಮೊದಲೇ ವಿಷ್ಣುದಾಸನೆಂಬ ಬಡ ಭಕ್ತನು ವಿಷ್ಣು ವಿಗ್ರಹವನ್ನು ತುಲಸೀ ದಳಗಳಿಂದ ಅಲಂಕಾರ ಮಾಡಿದ್ದನು. ಪುಣ್ಯದಿನದಲ್ಲಿ ದೇವರನ್ನು ಹೀಗೆ ಅತಿ ಸಾಮಾನ್ಯವಾಗಿ ಅಲಂಕರಿಸಬಹುದೆ ? ಅಂತಲೇ ಅದನ್ನು ನೋಡಿ ರಾಜನಿಗೆ ಕೋಪ ಬಂತು. ತನ್ನ ಸ್ವರ್ಣಾಭರಣಗಳಿಂದ ದೇವರನ್ನು ಅಲಂಕರಿಸಿ, ಘನ ರೀತಿಯಲ್ಲಿ, ದಾನಧರ್ಮಗಳನ್ನು ನೀಡಿ ಪೂಜೆ ನಡೆಸತೊಡಗಿದನು ರಾಜ.

ವಿಷ್ಣುದಾಸನು ಒಂದು ನಿರ್ಜನ ಪ್ರದೇಶಕ್ಕೆ ಹೋಗಿ ವಿಷ್ಣು ವಿಗ್ರಹವನ್ನು ಪ್ರತಿಷ್ಠಿಸಿ, ಭಿಕ್ಷೆ ಬೇಡಿ ತಂದ ಅಕ್ಕಿಯ ಅನ್ನ ಮಾಡಿ ವಿಗ್ರಹಕ್ಕೆ ನೈವೇದ್ಯವಿಟ್ಟು ಪೂಜಿಸಿಕೊಂಡಿದ್ದನು. ಪೂಜೆಯ ಅನಂತರ ಧ್ಯಾನದಲ್ಲಿರುವ ಸಮಯದಲ್ಲಿ ಯಾವನೋ ಒಬ್ಬನು ಅಲ್ಲಿಗೆ ಬಂದು ನೈವೇದ್ಯವನ್ನು ಅಪಹರಿಸಿಕೊಂಡು ಹೋಗುವುದನ್ನು ವಿಷ್ಣುದಾಸನು ಗಮನಿಸಿದನು.

ಒಂದು ದಿನ ಧ್ಯಾನದಲ್ಲಿರುತ್ತಾ, ಮಧ್ಯದಲ್ಲೇ ಕಣ್ಣು ಬಿಡಿಸಿ ನೋಡಿದನು ವಿಷ್ಣುದಾಸ. ಬಡವನೊಬ್ಬನು ಅಲ್ಲಿಗೆ ಬಂದು ಸಿಕ್ಕಿಬಿದ್ದೆನೆಂಬ ಭಯದಲ್ಲಿ ನೈವೇದ್ಯವನ್ನು ಮುಟ್ಟದೆಯೇ ಅಲ್ಲಿಂದ ಓಡತೊಡಗಿದನು. ವಿಷ್ಣುದಾಸನು ಆ ನೈವೇದ್ಯವನ್ನು ಎತ್ತಿಕೊಂಡು ಅವನನ್ನು ಕರೆಯುತ್ತಾ ಅವನ ಹಿಂದೆಯೇ ಹೋದನು. ಮುಂದಿನವನು ಸ್ವಲ್ಪ ದೂರ ಓಡಿ ಆಮೇಲೆ ಓಡಲಾಗದೆ ಸ್ಮೃಹೆತಪ್ಪಿ ಬಿದ್ದನು. ವಿಷ್ಣುದಾಸನು ಅವನಿಗೆ ಶೈತ್ಯೋಪಚಾರ ಮಾಡಿದ ಮೇಲೆ ಅವನು ಮೆಲ್ಲನೆ ಕಣ್ಣು ತೆರೆದನು. ಮರುಕ್ಷಣದಲ್ಲಿ ವಿಷ್ಣು ಪ್ರತ್ಯಕ್ಷನಾಗಿ ವಿಷ್ಣುದಾಸನನ್ನು ಆಲಿಂಗಿಸಿ ತನ್ನಲ್ಲಿ ಐಕ್ಯಮಾಡಿಕೊಂಡನು !

ಈ ವಿಷಯವನ್ನು ತಿಳಿದ ಚೋಳರಾಜನು ತಾನು ಮಾಡಿದ ಯಜ್ಞಯಾಗಗಳಿಗೆ, ದಾನಧರ್ಮಗಳಿಗೆ ಫಲಿತವೆಲ್ಲಿ ? ಅಂತಹುದೇನನ್ನೂ ಮಾಡದ ಆ ಬಡವನು ದೇವರ ದಯೆಗೆ ಪಾತ್ರನಾದನೆ ? ಈ ಚಿಂತೆಯಿಂದ ರಾಜನು ವಿರಕ್ತನಾಗಿ ಪ್ರಾಣತ್ಯಾಗ ಮಾಡಲು ಸಿದ್ಧನಾದನು. ಆಗ ವಿಷ್ಣು ಪ್ರತ್ಯಕ್ಷನಾಗಿ "ರಾಜಾ, ಆ ಬಡವನೂ ನೀನೂ ನನ್ನ ಭಕ್ತರೇ, ಸಮಾನರೇ. ನಿಮ್ಮ ನಿಮ್ಮ ಶಕ್ತ್ಯಾನುಸಾರವಾಗಿ ನೀವುಗಳು ನನ್ನನ್ನು ಆರಾಧಿಸಿದಿರಿ. ನಿನ್ನಲ್ಲಿ ಸ್ವಲ್ಪ ಅಹಂಕಾರವಿದ್ದಿತು. ಅದನ್ನು ಹೋಗಲಾಡಿಸಲಿಕ್ಕೇ ಹೀಗೆ ಮಾಡಿದೆನು." ಎಂದು ಅವನಿಗೆ ಬೋಧಿಸಿ ಸಮಾಧಾನ ಪಡಿಸಿದನು.





# ಮದುವೆಯ ಷರತ್ತು

ಒಂದು ಕಾಲದಲ್ಲಿ ವಸಂತಗಿರಿ ರಾಜ್ಯಕ್ಕೆ ಚಂದ್ರಕಾಂತನೆಂಬ ಯುವಕನು ರಾಜನಾದನು. ಅವನು ಒಂದು ದಿನ ಸೂರ್ಯೋದಯದ ವೇಳೆಯಲ್ಲಿ ಒಬ್ಬನೇ ಕುದುರೆಯ ಮೇಲೆ ಕುಳಿತುಕೊಂಡು ಸಮೀಪದಲ್ಲಿದ್ದ ಅರಣ್ಯದ ಕಡೆಗೆ ವಿಹಾರ ಹೊರಟನು. ಅಲ್ಲಿದ್ದ ಸುಂದರವಾದೊಂದು ಕೊಳವನ್ನು ನೋಡಿ, ಅದರಲ್ಲಿ ಇಳಿದು ಸ್ನಾನಮಾಡಿ ಮೇಲೆ ಬಂದಾಗ, ಬೇಡರ ಯುವತಿಯೊಬ್ಬಳು ತನ್ನ ಕೇರಿಯ ಕಡೆಗೆ ಹೋಗುತ್ತಿರುವುದು ಕಾಣಿಸಿತು. ಅವಳ ಸೌಂದರ್ಯವೂ, ನಿರ್ಮಲತೆಯೂ ಚಂದ್ರಕಾಂತನನ್ನು ಸೆಳೆದುವು.

ಅಲ್ಲಿಂದ ಚಂದ್ರಕಾಂತನು ಕುದುರೆಯ ಮೇಲೇರಿಕೊಂಡು ರಾಜಭವನಕ್ಕೆ ಹಿಂದಿರುಗಿದನು. ಅವನ ಮನಸ್ಸಿನಲ್ಲಿ ಆ ಬೇಡರ ಯುವತಿಯನ್ನು ವಿವಾಹ ಮಾಡಿಕೊಳ್ಳಬೇಕೆಂದು ತೋರಿತು. ಅದರ ಒತ್ತಡವು ನಿಮಿಷ ನಿಮಿಷಕ್ಕೂ ಹೆಚ್ಚುತ್ತಾ ಹೋಗುತ್ತಿತ್ತು. ಆದರೆ ಒಂದು ದೇಶಕ್ಕೆ ರಾಜನಾದ ತಾನು ಇಂತಹ ವಿವಾಹ ಮಾಡಿಕೊಳ್ಳುವುದು ಭಾವ್ಯವಾಗಿರುವುದೇ ಎಂಬ ಸಂಶಯವು ಅವನ ಬಯಕೆಯ ಸುತ್ತಲೂ ಸುಳಿದುಕೊಂಡಿತ್ತು.

ರಾಜನು ಅನ್ಯಮನಸ್ಕನಾಗಿರುವುದನ್ನು ಗಮನಿಸಿದ ಮಂತ್ರಿ ದೇವವರ್ಮನು ಅವನ ಹತ್ತಿರ ಬಂದು, "ಮಹಾರಾಜಾ, ನೀವು ಏನೋ ಸಮಸ್ಯೆಯನ್ನು ಕುರಿತು ಆಲೋಚಿಸುವ ಹಾಗಿದೆ. ಅದೇನೆಂದು ತಿಳಿಯಬಹುದೇ ? " ಎಂದು ಕೇಳಿದನು.

ಅದಕ್ಕೆ ಚಂದ್ರಕಾಂತನು ಮುಚ್ಚುಮರೆ ಏನೂ ಮಾಡದೆ, ತಾನು ಅರಣ್ಯದ ಹತ್ತಿರ ನೋಡಿದ ಬೇಡರ ಯುವತಿಯ ಸಂಗತಿಯನ್ನು ಹೇಳಿ, "ನನ್ನ ಮನಸ್ಸನ್ನು ಪೂರ್ತಿ ಅವಳು ವಶಪಡಿಸಿಕೊಂಡಿದ್ದಾಳೆ. ಅವಳನ್ನೇ ವಿವಾಹ ಮಾಡಿಕೊಳ್ಳಬೇಕೆಂದಿದೆ. ಆದರೆ ದೇಶವನ್ನು ಪಾಲಿಸುವ ರಾಜನು ಅಂತಹ ಕೆಲಸ ಮಾಡುವುದು ಸರಿಯೇ ಎಂಬ ಪ್ರಶ್ನೆ ಕಾಡುತ್ತಿದೆ. ಅದನ್ನೇ ಆಲೋಚಿಸುತ್ತಿದ್ದೇನೆ " ಎಂದನು.

ಮಂತ್ರಿ ಒಂದು ನಿಮಿಷ ಆಲೋಚಿಸಿ, "ಇದರಲ್ಲಿ ಧರ್ಮಾಧರ್ಮಗಳ ಪ್ರಶ್ನೆಗೆ ಎಡೆಯಿಲ್ಲ" ಎಂದು ರಾಜನ ಕಿರೀಟದ ವಜ್ರವನ್ನು ತೋರಿಸುತ್ತ, "ಒಂದು ಕಾಲದಲ್ಲಿ ಇದು ಮಣ್ಣಿನಲ್ಲಿದ್ದ ವಸ್ತು. ಸಾಣೆ ಹಿಡಿದುದರಿಂದ ಇದು ಭಾರಿ ಬೆಲೆಯುಳ್ಳದ್ದಾಗಿದೆ. ತಮ್ಮ ಕಿರೀಟವನ್ನು ಅಲಂಕರಿಸಿಕೊಂಡಿದೆ. ಆ ಬೇಡರ

ಎಂ. ಕೆ. ಈಶ್ವರರಾವ್

ಯುವತಿಗೆ ನೀವು ಒಂದು ವರ್ಷದೊಳಗೆ ರಾಜ ಮರ್ಯಾದೆಗಳನ್ನೆಲ್ಲಾ ಕಲಿಸಿಬಿಡಬಹುದು. ಅದರ ಮೇಲೆ ನೀವು ಅವಳನ್ನು ವಿವಾಹ ಮಾಡಿಕೊಳ್ಳುವುದು ಪ್ರಜೆಗಳಿಗೆ ಆದರ್ಶಪ್ರಾಯವಾಗಿಯೂ ಇರುತ್ತದೆ. ನಾಳೆಯೇ ನಾನು ಪರಿವಾರದೊಂದಿಗೆ ಬೇಡರ ಕೇರಿಗೆ ಹೋಗುತ್ತೇನೆ" ಎಂದನು.

ಮಂತ್ರಿ ಹೇಳಿದುದನ್ನು ಕೇಳಿ ಚಂದ್ರಕಾಂತನು ತೃಪ್ತನಾಗಿ, "ನೀವು ಹೋಗುವುದಲ್ಲ, ನಾನೇ ಹೋಗುತ್ತೇನೆ. ನಾನು ಅವಳನ್ನು ನೋಡಿದ ಹಾಗೆ, ಅವಳೂ ನನ್ನನ್ನು ನೋಡಬೇಕಷ್ಟೆ?" ಎಂದನು ಚಂದ್ರಕಾಂತ ರಾಜ.

ಮರುದಿನ ಚಂದ್ರಕಾಂತನು ಬೇಡರ ಕೇರಿಗೆ ಹೋದನು. ಆ ಯುವತಿ ಬೇಡರ ದೊರೆಯ ಮಗಳಾದ ಚಂಪಕವಲ್ಲಿಯೆಂದು ತಿಳಿಯಿತು.

ರಾಜನನ್ನು ನೋಡಿ ಬೇಡರ ದೊರೆ ರಾಜನಿಗೆ ತಕ್ಕ ಮರ್ಯಾದೆಗಳನ್ನು ಮಾಡಿ, "ಮಹಾರಾಜಾ, ತಾವು ಸ್ವತಃ ನಮ್ಮ ಕೇರಿಗೆ ಬಂದುದನ್ನು ನೋಡಿ ಬಹಳ ಸಂತೋಷವಾಯಿತು. ತಮ್ಮ ಬರುವಿಕೆಯ ಕಾರಣ ಕೇಳಬಹುದೆ?" ಎಂದನು.

ಚಂದ್ರಕಾಂತನು ಬಾಗಿಲ ಬದಿಯಲ್ಲಿ ನಿಂತಿದ್ದ ಚಂಪಕವಲ್ಲಿಯನ್ನು ತೋರಿಸುತ್ತ, "ಅವಳಿಗೆ ಇಷ್ಟವಿದ್ದರೆ ನಾನು ಅವಳನ್ನು ವಿವಾಹ ಮಾಡಿಕೊಳ್ಳಬೇಕೆಂದಿದ್ದೇನೆ. ಈ ಸಂಗತಿಯನ್ನು ಹೇಳಲಿಕ್ಕಾಗಿಯೇ ನಾನು ಇಲ್ಲಿಗೆ ಬರಬೇಕಾಯಿತು" ಎಂದನು.

ಆ ಮಾತು ಕೇಳಿದ ಕೂಡಲೇ ಚಂಪಕವಲ್ಲಿ ಒಳಗೆ ಹೋಗಿಬಿಟ್ಟಳು. ಬೇಡರ ದೊರೆಯೂ ಒಳಗೆ ಹೋಗಿ, ತನ್ನ ಕುಟುಂಬ ಸಭ್ಯರೊಂದಿಗೆ ಮಾತಾಡಿ, ಸ್ವಲ್ಪ ಹೊತ್ತಿನ ಮೇಲೆ ಹಿಂದಿರುಗಿ ಬಂದು ರಾಜನೊಂದಿಗೆ, "ಕ್ಷಮಿಸಬೇಕು, ಮಹಾರಾಜರೇ. ಈ ವಿವಾಹವು ಬಹಳ ಕಷ್ಟ ಸಾಧ್ಯವಾಗಿದೆ. ವಿವಾಹವು ನಡೆದರೂ ಚಂಪಕವಲ್ಲಿ ನಿಮ್ಮೊಂದಿಗೆ ಬರುವುದಿಲ್ಲ. ಇಲ್ಲಿಯೇ ಇರುತ್ತಾಳೆ. ನಮ್ಮ ಷರತ್ತು ನಿಮಗೆ ಇಷ್ಟವಾಗಲಿಕ್ಕಿಲ್ಲವೆಂದು ಅಂದುಕೊಳ್ಳುತ್ತೇನೆ" ಎಂದನು.



ಆ ಮಾತು ಕೇಳಿ ಚಂದ್ರಕಾಂತನು ಆಶ್ಚರ್ಯ ಪಡುತ್ತ, "ಮದುವೆ ಮಾಡಿಕೊಂಡ ಮೇಲೆ ನನ್ನ ಹೆಂಡತಿ ನನ್ನೊಂದಿಗೆ ರಾಜಭವನಕ್ಕೆ ಬಾರದಿದ್ದರೆ ಮತ್ತೆ ವಿವಾಹಕ್ಕೆ ಅರ್ಥವೇ ಇಲ್ಲ" ಎಂದು ಹೇಳಿ ಖಿನ್ನನಾಗಿ ಅಲ್ಲಿಂದ ನಗರಕ್ಕೆ ಹಿಂದಿರುಗಿ ಬಿಟ್ಟನು.

ಈ ಸಂಗತಿಯನ್ನು ಕೇಳಿ ಮಂತ್ರಿ ದೇವವರ್ಮನಿಗೆ ಬಹಳ ಕೋಪ ಬಂದುಬಿಟ್ಟಿತು. ಅದನ್ನು ಬಿಮ್ಮಗೆ ಹತ್ತೊತ್ತಿಕೊಂಡು ರಾಜನನ್ನು ನೋಡಿ, "ನಿಮಗೆ ಇನ್ನೂ ಅವಳನ್ನು ಮದುವೆಯಾಗಬೇಕೆಂದೇ ಇದೆಯೇನು ?" ಎಂದು ಕೇಳಿದನು.

ಚಂದ್ರಕಾಂತನು ಹೌದೆಂಬಂತೆ ತಲೆಯಾಡಿಸಿದನೇ ಹೊರತು ಬಾಯಿ ತೆರೆದು ಮಾತಾಡಲಿಲ್ಲ. "ಏನು ಮಾಡಬೇಕೆನ್ನುವಿರಿ ?" ಎಂದು ಕೇಳಿದನು ಮಂತ್ರಿ. "ಅವಳ ತಂದೆ ಹೇಳಿದ ಷರತ್ತು ? ಅದಕ್ಕೇನು ಮಾಡುವುದೆಂಬುದೇ ಯೋಚನೆ" ಎಂದನು ರಾಜ.

ಮಂತ್ರಿ ದೇವವರ್ಮನು ಯೋಚಿಸುತ್ತ ಸ್ವಲ್ಪ ಹೊತ್ತು ಸುಮ್ಮನಿದ್ದು, "ಈಗ ನನಗೆ ಅಪ್ಪಣೆ ಕೊಡಿರಿ ಮಹಾರಾಜರೇ" ಎಂದಷ್ಟೇ ಹೇಳಿ ಹೊರಟು ಹೋದನು.

ಮರುದಿನ ದೇವವರ್ಮ ಮಂತ್ರಿ ಚಂದ್ರಕಾಂತ ರಾಜನ ಬಳಿಗೆ ಬಂದು, "ಸ್ವಲ್ಪ ಉದ್ಯಾನದಲ್ಲಿ ವಿಹರಿಸೋಣ ಬನ್ನಿ" ಎಂದು ಕರೆದುಕೊಂಡು ಹೋದನು.

ಇಬ್ಬರೂ ಉದ್ಯಾನದಲ್ಲಿ ವಿಹರಿಸಿಕೊಂಡಿರುವಾಗ, ಪರಿಚಾರಿಕೆಯರ ನಡುವಿನಲ್ಲಿ ರಾಜಕನ್ಯೆಯಂತೆ ಕುಳಿತಿದ್ದ ಚಂಪಕವಲ್ಲಿಯನ್ನು ರಾಜನು ನೋಡಿದನು.

ಚಂದ್ರಕಾಂತನು ಅತ್ಯಾಶ್ಚರ್ಯದಿಂದ ದೇವವರ್ಮನ ಮುಖ ನೋಡಿದನು. ಮಂತ್ರಿ ಮುಗುಳು ನಗುತ್ತ, "ಮಹಾರಾಜಾ, ರಾತ್ರಿಯಲ್ಲಿ ಆಯುಧಪಾಣಿಗಳಾದ ಕೆಲವು ಮಂದಿ ಭಟರೊಂದಿಗೆ ನಾಲ್ಕು ಮಂದಿ ದಾಸಿಯರನ್ನು ಕೂಡಾ ಕಳುಹಿಸಿ ಇವಳನ್ನು ಬೇಡರ ಕೇರಿಯಿಂದ ಇಲ್ಲಿಗೆ ತರಿಸಿದ್ದೇನೆ. ಇವಳ ತಂದೆಯಾಗಲಿ, ಇತರ ಬೇಡ ವೀರರಾಗಲೀ ನಮ್ಮ ಭಟರನ್ನು ತಡೆಯುವ ಪ್ರಯತ್ನವೇನೂ ಮಾಡ



ಲಿಲ್ಲ. ದೇಶವನ್ನಾಳುವ ರಾಜನ ಅಪೇಕ್ಷೆಯನ್ನು ತಿರಸ್ಕರಿಸುವುದು ಎಷ್ಟು ದೊಡ್ಡ ತಪ್ಪೆಂದು ಅವರೆಲ್ಲ ತಿಳಿದಿರಬೇಕು" ಎಂದನು.

ಮಂತ್ರಿ ಮಾಡಿಸಿದ ಕೆಲಸವನ್ನು ನೋಡಿ ಚಂದ್ರಕಾಂತನು ಸಂತೋಷಪಡುವುದಕ್ಕೆ ಬದಲಾಗಿ, ತುಂಬಾ ನೊಂದುಕೊಳ್ಳುತ್ತಾ, "ನೀವು ಹೀಗೆ ಮಾಡಬಾರದಿತ್ತು. ಬಲಪ್ರಯೋಗ ಮುಂತಾದ ಒತ್ತಾಯಗಳಿಂದ ಯಾರಿಂದಲೂ ಇಷ್ಟವಿಲ್ಲದ ಕೆಲಸವನ್ನು ಮಾಡಿಸಬಾರದು. ಆದರಿಂದ ಎರಡು ಕಡೆಯವರಿಗೂ ಸುಖವಿಲ್ಲ. ಈ ದಿನ ಸಾಯಂಕಾಲವೇ ನಾನು ಸ್ವತಃ ಇವಳನ್ನು ಕರೆದುಕೊಂಡು ಹೋಗಿ ಇವಳ ತಂದೆಗೆ ಒಪ್ಪಿಸಿ ಬಿಡುತ್ತೇನೆ" ಎಂದನು.

ಈಗ ದೇವವರ್ಮ ಮಂತ್ರಿಯ ಮುಖವು ಖಿನ್ನವಾಯಿತು. ಚಂದ್ರಕಾಂತನು ಹೇಳಿದ ಹಾಗೆಯೇ ಚಂಪಕವಲ್ಲಿಯನ್ನು ಬೇಡರ ಕೇರಿಗೆ ಕರೆದುಕೊಂಡು ಹೋದನು.

ಅವಳ ತಂದೆ ಬಂಧುಗಣದೊಂದಿಗೆ ರಾಜನನ್ನು ಸ್ವಾಗತಮಾಡಿ, "ಮಹಾರಾಜಾ, ನಿಮ್ಮ ಪ್ರೇಮವನ್ನು ಪರೀಕ್ಷಿಸಲಿಕ್ಕಾಗಿಯೇ ಮದುವೆಗೆ ಹಾಗೊಂದು ಷರತ್ತು ಹೇಳಿದೆನು. ನೀವು ಮೊದಲನೇ ಸಾರಿ ಇಲ್ಲಿಗೆ ಬಂದಾಗ, ನನ್ನ ಮಗಳಿಗೆ ಇಷ್ಟವಿದ್ದರೆ ಮದುವೆಯಾಗುತ್ತೇನೆಂದು ಹೇಳಿದಿರಿ, ಆಗಲೇ ನನಗೆ ತಮ್ಮ ಒಳ್ಳೆಯತನವು ಅರ್ಥವಾಯಿತು. ಆದರೆ ಮದುವೆಯಾಗಿ ಹೋದ ಮೇಲೆ, ನನ್ನ ಕುಮಾರಿ ಪಟ್ಟಮಹಿಷಿಯಾಗಲು ಅರ್ಹಳಲ್ಲವೆಂದು ಹೇಳುವಿರೇನೋ ಎಂಬ ಭಯವೂ ಒಂದುದರಿಂದ, ಮಗಳ ಕ್ಷೇಮವನ್ನು ನೋಡಬೇಕಾದುದು ತಂದೆಯ ಕರ್ತವ್ಯವೆಂದುಕೊಂಡು, ಹಾಗೆ ಒಂದು ಷರತ್ತು ಹೇಳಿದೆನು. ಯಾವ ಸ್ತ್ರೀಗಾದರೂ ಗಂಡನೊಂದಿಗಿರುವುದೇ ಇಷ್ಟ. ಸವತಿಯುಂತಿರಲು ಇಷ್ಟವಿರಲಾರದಷ್ಟೇ ? ಈಗ ತಮ್ಮ ಉದ್ದೇಶ ಸ್ಪಷ್ಟವಾಯಿತು. ತಾವೇ ಸ್ವತಃ ಇವಳನ್ನು ಕರೆದು ತಂದಿದ್ದೀರಿ. ತಮ್ಮ ಮಂತ್ರಿಯವರು ತಮ್ಮ ಇಚ್ಛೆಯಿಲ್ಲದೆಯೇ ಹಾಗೆ ಪ್ರವರ್ತಿಸಿರಬೇಕೆಂದೂ ಅರ್ಥಮಾಡಿಕೊಂಡೆನು. ತಾವೇನು ಮಾಡುವಿರೋ ನೋಡಲಿಕ್ಕಾಗಿಯೇ ಅವರನ್ನು ತಡೆಯಲಿಲ್ಲ" ಎಂದನು.

ಇದನ್ನೆಲ್ಲ ಕೇಳಿ ಚಂದ್ರಕಾಂತ ರಾಜನಿಗೆ ಬಹಳ ಸಂತೋಷವಾಯಿತು. ಮುಂದೆ ಬಹು ಬೇಗದ ಶುಭ ಮುಹೂರ್ತದಲ್ಲಿ ಚಂಪಕವಲ್ಲಿಯೊಂದಿಗೆ ಚಂದ್ರಕಾಂತ ರಾಜನ ವಿವಾಹವು ವೈಭವದಿಂದ ನೆರವೇರಿತು.

ಓದು ಬರೆಹವೇ ಮೊದಲಾದ ರಾಜ ಮನೆತನಕ್ಕೆ ಬೇಕಾದ ಎಲ್ಲವನ್ನೂ ಒಂದು ವರ್ಷದೊಳಗೇ ಚಂಪಕವಲ್ಲಿ ಕಲಿತು ರಾಜನಿಗೆ ತಕ್ಕ ಪಟ್ಟಮಹಿಷಿ ಎಂಬ ಯೋಗ್ಯತೆಯನ್ನೂ ಪಡೆದಳು.





# ಪಕ್ಕದವನ ದೆವ್ವ

ಸಿಂಗಹಾಡಿ ಎಂಬ ಒಂದು ಗ್ರಾಮದಲ್ಲಿ ರಂಗರಾಜನೆಂಬೊಬ್ಬ ಆಸ್ತಿವಂತನು, ಗ್ರಾಮದ ನಡುವಿನಲ್ಲಿ ಎರಡು ಅಂತಸ್ತಿನ ಮಾಳಿಗೆ ಮನೆಯಲ್ಲಿ ವಾಸ ಮಾಡಿಕೊಂಡಿದ್ದನು. ಅವನ ಮಾಳಿಗೆ ಮನೆಯ ಪಕ್ಕದಲ್ಲಿಯೇ ಹಳೆಯದೊಂದು ಹೆಂಚಿನ ಮನೆಯಿದ್ದಿತು, ಅದು ಶಿವಯ್ಯನೆಂಬೊಬ್ಬ ಬಡವನದು. ಆ ಮನೆಯ ಮೇಲೆಯೇ ರಂಗರಾಜನ ಕಣ್ಣು.

ಶಿವಯ್ಯನಂಥ ಗತಿಗೇಡಿಯೊಬ್ಬನು ತನ್ನ ನೆರೆ ಮನೆಯವನಾಗಿರುವುದು ರಂಗರಾಜನಿಗೆ ಸಹಿಸಲಾಗುತ್ತಿದ್ದಿಲ್ಲ. ಅವನನ್ನು ಯಾವುದೋ ಒಂದು ವಿಧವಾಗಿ ಅಲ್ಲಿಂದ ಓಡಿಸಿಬಿಡಬೇಕೆಂದು ಏನೇನೋ ಪ್ರಯತ್ನ ಮಾಡಿಕೊಂಡೇ ಇದ್ದನು. ಆದಾವುದಕ್ಕೂ ಬಡ ಶಿವಯ್ಯ ಕದಲುತ್ತಿರಲಿಲ್ಲ.

"ಎಲೋ ಶಿವಾ! ನಿನ್ನ ಹಾಳಾದ ಕೋಳಿಗಳು ನನ್ನ ವಠಾರದ ಗಿಡಗಳನ್ನೆಲ್ಲ ಕೆದಕಿ ಹಾಕುತ್ತವೆ. ಅವುಗಳನ್ನು ಹದ್ದಿನಲ್ಲಿಟ್ಟುಕೊಳ್ಳಲಿಕ್ಕೆ ಕೈಲಾಗದವನಿಗೆ ಕೋಳಿಗಳೇಕೆ?" ಎಂದು ಒಂದು ದಿನ ಜರೆದರೆ, "ನಿನ್ನ ಮನೆಯಿಂದ ಬರುವ ಕೊಳೆ ನೀರೆಲ್ಲಾ ನನ್ನ ಮನೇ ಮುಂದೆ ಬರುತ್ತಾ ಇದೆ! ಇದು ಅನ್ಯಾಯ!" ಎಂದು ಇನ್ನೊಂದು ದಿನ ಶಿವಯ್ಯನ ಮೇಲೆ ರೇಗಿ ಬೀಳುತ್ತಿದ್ದನು. "ಎಷ್ಟು ಹೇಳಿದರೂ ಕೇಳದಿದ್ದರೆ ಏನಯ್ಯಾ ಅರ್ಥ? ಎಲ್ಲರಂಥ ಮನುಷ್ಯನಲ್ಲವೇ ನೀನು? ಇನ್ನೊಬ್ಬರಿಗೆ ತೊಂದರೆ ಕೊಡಬಾರದೆಂದು ಗೊತ್ತಾಗಬೇಡವೆ?" ಎನ್ನುತ್ತಿದ್ದನು ಆಗಾಗ.

ಶಿವಯ್ಯನಿಗೆ ಧನವಂತ ರಂಗರಾಜನ ಉದ್ದೇಶವೇನೆಂದು ಗೊತ್ತಿದ್ದಿತು. ಅವನು ಅಲ್ಲೀ ಇಲ್ಲೀ ಕೂಲಿನಾಲಿ ಮಾಡಿಕೊಂಡು ಅಜ್ಜನ ಕಾಲದಿಂದ ಬಂದ ಆ ಹೆಂಚಿನ ಮನೆಯಲ್ಲಿ ಹೆಂಡತಿ ಮಕ್ಕಳೊಂದಿಗೆ ಕಾಲ ಕಳೆಯುತ್ತಿದ್ದನು. ಆ ಮನೆಯನ್ನು ರಂಗರಾಜನಿಗೆ ಮಾರುವುದಾದರೆ, ಮತ್ತೆ ಅವನಿಗೆ ಆ ಗ್ರಾಮದಲ್ಲಿ ವಾಸಮಾಡಲು ಜಾಗೆಯೇ ಇಲ್ಲದಂತಾಗುತ್ತದೆ. ಮನೆ ಮಾರಿ ಬಂದ ಹಣದಿಂದ ಬಾಡಿಗೆ ಮನೆಯಲ್ಲಿ ಎಷ್ಟು ದಿನ ತಳ್ಳಲು ಸಾಧ್ಯ?

ತನ್ನ ಕೋಪತಾಪ ಕೂಗು ಗರ್ಜನೆಗಳಿಗಾವುದಕ್ಕೂ ಶಿವಯ್ಯ ಬಾಗದಿರುವುದನ್ನು ನೋಡಿ, ರಂಗರಾಜನು ಬಹಳ ಆಲೋಚನೆ ಮಾಡಿ ಒಂದು ದಿನ ಶಿವಯ್ಯನನ್ನು ತನ್ನ ಮನೆಗೆ ಕರೆಯಿಸಿ, "ನೋಡು ಶಿವಯ್ಯಾ, ನೀನು ಸಾಕುವ ಕೋಳಿ

ಜೆ. ಜೆ. ಲಕ್ಷ್ಮಿ.



ಕೊಕ್ಕರೆಗಳಿಂದ ಮಾತ್ರ ನಮಗೆ ಉಪದ್ರವಲ್ಲ. ನಿನ್ನ ಮಕ್ಕಳಿಂದ ಕೂಡಾ ನಮ್ಮ ಮನೆಯಲ್ಲಿ ಶಾಂತಿ ಯಿಲ್ಲದಂತಾಗುತ್ತಿದೆ. ನಿನ್ನವರ ಆ ಕೂಗಾಟ ಕಿರಿ ಚಾಟಗಳಿಂದ ನನಗೆ ನಿದ್ರೆಯೇ ಬರುವುದಿಲ್ಲ. ಪೂಜೆ ಮಾಡಲಿಕ್ಕೂ ಆಗುವುದಿಲ್ಲ. ನಿನ್ನ ಮನೆ ಸುಟ್ಟು ಹೋದರೆ ಹೊರತು ನನಗೆ ಈ ಉಪದ್ರುಗಳು ತಪ್ಪುವಂತಿಲ್ಲ. ಸ್ವಲ್ಪ ಕೂಡಾ ನೆರೆಹೊರೆಯವರ ಸಂಗತಿ ನೋಡದಿದ್ದರೆ ಹೇಗೆ? ಎಂಥ ಮನುಷ್ಯ ನೀನು? ಬಿಸಿಲು ಕಾಲದಲ್ಲಿ ನಿನ್ನ ಮಕ್ಕಳೇ ನಿನ್ನ ಮನೆಗೆ ಬೆಂಕಿ ಹಚ್ಚಿದರೆ ನನ್ನ ಮೇಲೆ ದೂರು ಹಾಕುವಿಯೇನು? ಬೀದೀಲಿ ಹೋಗುವವರ ಕಿಡಿ ಯಿಂದಲೂ ಬೆಂಕಿ ಬೀಳುತ್ತದೆ ಗೊತ್ತಾ?" ಎಂದನು ಕೋಪದಿಂದ.

ಮನೆ ಸುಟ್ಟು ಹೋಗುವುದೆಂಬ ರಂಗರಾಜನ ಮಾತಿನಲ್ಲಿ ಹೊರಟ ಸೂಚನೆಯನ್ನು ನೋಡಿ ಶಿವಯ್ಯನಿಗೆ ಸಂದೇಹವಾಯಿತು. ರಂಗರಾಜನು ಮನಸ್ಸು ಮಾಡಿದರೆ ಹಾಗೆ ಮಾಡಿಸಿದರೂ ಮಾಡಿಸಿಯಾನೆಂದು ತೋರಿತು. ಇನ್ನು ಇಂತಹ ನೆರೆಮನೆಯವನು ಕೊಡುವ ಬಾಧೆ ಬವಣೆಗಳನ್ನು ಸಹಿಸಿಕೊಳ್ಳುವುದಕ್ಕಿಂತ, ಊರುಬಿಟ್ಟು ಹೋಗು ವುದೇ ಕ್ಷೇಮವೆಂದು ಎಣಿಸಿದನು. ಹಣವಂತ ರೊಡನೆ ವಾದವಿವಾದ ಮಾಡಿ ತನ್ನಿಂದ ಗೆಲ್ಲಲು ಸಾಧ್ಯವಿಲ್ಲವೆನಿಸಿತು.

ಆಮೇಲೆ ಶಿವಯ್ಯನು ರಂಗರಾಜನು ಕೇಳಿದ ಬೆಲೆಗೆ ತನ್ನ ಮನೆಯನ್ನು ಅವನಿಗೇ ಮಾರಿ, ಹೆಂಡತಿ ಮಕ್ಕಳನ್ನು ಕರೆದುಕೊಂಡು ಎತ್ತಲೋ ಹೊರಟು ಹೋದನು.

ಕೆಲವು ತಿಂಗಳು ಕಳೆದ ಮೇಲೆ, ಇದ್ದಕ್ಕಿದ್ದ ಹಾಗೆ ರಂಗರಾಜನಿಗೆ ಪಟ್ಟಣವಾಸ ಮಾಡಬೇಕೆಂಬ ಇಚ್ಛೆ ಯುಂಟಾಯಿತು. ಅಂತಲೇ ಅವನು ಪಟ್ಟಣದಲ್ಲಿ ಹತ್ತು ಮಂದಿ ಓಡಾಡುವ ನಡುಬೀದಿಯ ಬದಿ ಯಲ್ಲಿ ಮಾರಾಟಕ್ಕಿದ್ದ ಒಂದು ಮನೆಯನ್ನು ಕೊಂಡು ಕೊಂಡು, ಗ್ರಾಮದಲ್ಲಿದ್ದ ತನ್ನ ಕುಟುಂಬವನ್ನು ಅಲ್ಲಿಗೆ ಬದಲಾಯಿಸಿ ಇರತೊಡಗಿದನು.

ರಂಗರಾಜನು ಆ ಮನೆಯಲ್ಲಿ ತಳವೂರಿದ ಮರು ದಿನವೇ ಪಕ್ಕದ ಮನೆಯಲ್ಲಿ ಏನೋ ಕೋಲಾ ಹಲವು ಪ್ರಾರಂಭವಾಗಿ ಜನರ ಗುಂಪು ಸೇರುವು ದನ್ನು ನೋಡಿದನು. ಅಲ್ಲಿ ಏನು ನಡೆಯುತ್ತದೆಂದು ನೋಡುವ ಕುತೂಹಲದಿಂದ ರಂಗರಾಜನು ಆ ಮನೆಯ ಮುಂದೆ ಹೋದನು.

ಅಲ್ಲಿ ಸೇರಿದ ಒಬ್ಬನ ಹತ್ತಿರ ರಂಗರಾಜನು ಏನು ಸಂಗತಿಯೆಂದು ಕೇಳಲು ಅವನು, "ಈ ಮನೆಯ ಯಜಮಾನ ತುಂಬಾ ಬೆಲೆಕೊಟ್ಟು ಈ ಮನೆಯನ್ನು ಕೊಂಡುಕೊಂಡ. ಆದರೂ ಒಂದು ದಿನ ಕೂಡಾ ಅವನು ಈ ಮನೆಯಲ್ಲಿ ಪ್ರಶಾಂತ ವಾಗಿ ಇರಲಾಗದೆ ಹೋಗಿದ್ದಾನೆ. ಈ ಮನೆಯೊಳಗೆ ಒಂದು ದೆವ್ವ ಓಡಾಡಿಕೊಂಡಿದೆ. ಎಷ್ಟು ಮಂತ್ರ

ತಂತ್ರಗಳನ್ನು ಮಾಡಿಸಿದರೂ ಅದು ಮನೆಯನ್ನು ಬಿಟ್ಟು ಹೋಗುವುದಿಲ್ಲ. ಮನೆಯ ಯಜಮಾನನು ಕಡೇ ಪ್ರಯತ್ನವೆಂದು ಈಗ ಮಲೆಯಾಳ ದೇಶದಿಂದ ಬಂದ ಒಬ್ಬ ದೊಡ್ಡ ಮಂತ್ರಗಾರನನ್ನು ಕರೆಯಿಸಿದ್ದಾನೆ. ಅವನ ಮಂತ್ರದ ಶಬ್ದ ಎಷ್ಟು ಜೋರಾಗಿದೆ! ಯಾವ ದೆವ್ವವಾದರೂ ಹೆದರಲೇಬೇಕು. ಅದೇ ಈ ಗಲಾಟೆ! ಗೌಜಿ! ಗಡಿಬಿಡಿ!" ಎಂದನು.

ರಂಗರಾಜನು ಇನ್ನಿಷ್ಟು ಮುಂದಕ್ಕೆ ಹೋಗಿ ಮನೆಯೊಳಗೆ ಏನೆಲ್ಲಾ ನಡೆಯುತ್ತದೆಂಬುದನ್ನು ನೋಡಿದನು. ಮಲೆಯಾಳ ಮಾಂತ್ರಿಕನು ದೆವ್ವವನ್ನು ಓಡಿಸಲು ಅಗತ್ಯವಿದ್ದ ವಸ್ತು ಪದಾರ್ಥಗಳನ್ನು ಸೇರಿಸಿ ಮನೆ ಯಜಮಾನನೊಂದಿಗೆ, "ಶೇಷಣ್ಣನವರೇ! ನೀವೇನೂ ಗಾಬರಿಬೀಳಬೇಡಿ. ನಿಮ್ಮ ದುರದೃಷ್ಟದಿಂದಾಗಿ ಈ ಮನೆಗೆ ದೆವ್ವ ಬಡಿದಿದೆ. ಆದರೆ ನಿಮ್ಮ ಒಳ್ಳೆಯ ಅದೃಷ್ಟದಿಂದಲೇ ನಾನು ಈ ಊರಿಗೆ ಬರುವಂತಾಯಿತು. ನನ್ನ ಪೂಜೆ ಮುಗಿಯುವಷ್ಟರಲ್ಲಿ ಆ ದೆವ್ವವು ಊರಿನ ಗಡಿ ದಾಟಿ, ಹಿಂದಿರುಗಿ ನೋಡದೆ ಓಡಿಬಿಡುತ್ತದೆ!" ಎಂದನು.

ಶಿವಣ್ಣನು ದಿಗಿಲಿನಿಂದ ಅಲ್ಲಿ ಸೇರಿದವರನ್ನು ನೋಡುತ್ತ, "ನನ್ನ ದುರದೃಷ್ಟವಲ್ಲದೆ ಮತ್ತೇನಿದು? ನಾನು ಅತ್ಯುತ್ತಮವಾದ ಆ ಪಕ್ಕದ ಮನೆಯನ್ನು ಕೊಂಡುಕೊಳ್ಳುವುದನ್ನು ಬಿಟ್ಟು ಈ ಮನೆಯನ್ನು ಕೊಂಡುಕೊಂಡದ್ದು ದುರದೃಷ್ಟದಿಂದಲೇ. ನನ್ನ ದುರದೃಷ್ಟಕ್ಕೆ ಸರಿಯಾಗಿ ಯಾವನೋ ರಂಗರಾಜನೆಂಬ ದೊಡ್ಡ ಶ್ರೀಮಂತ ಎರಡು ಪಾಲು ಬೆಲೆ ಕೊಟ್ಟು ಅದನ್ನು ಕೊಂಡುಕೊಂಡು ಬಿಟ್ಟ! ಇದೇ ನನ್ನ ಕಡೇ ಪ್ರಯತ್ನ. ಈ ಮನೆಯ ದೆವ್ವ ಬಿಡದೇ ಹೋದರೆ ಎಷ್ಟು ದೊಡ್ಡ ನಷ್ಟವಾದರೂ ನಾನು ಈ ಮನೆಯನ್ನು ಬಿಟ್ಟು ಹೋಗಿಬಿಡುತ್ತೇನೆ. ಹೇಗೆ ದೆವ್ವದೊಂದಿಗೆ ಪೇಚಾಡಿಕೊಂಡಿರಲಿ?" ಎಂದನು.



ಶೇಷಣ್ಣನ ಮಾತು ಮುಗಿದ ಕೂಡಲೇ ಮನೆಯನ್ನು ಹಿಡಿದುಕೊಂಡಿದ್ದ ದೆವ್ವವು ಗುಡುಗಿನಂತಹ ಶಬ್ದದಿಂದ, "ಏನಂದಿಯೋ ಶೇಷಾ! ಪಕ್ಕದ ಮನೇನ ಕೊಂಡುಕೊಂಡದ್ದು ರಂಗರಾಜನೋ? ಸಿಂಗಹಾಡಿ ಗ್ರಾಮದ ರಂಗರಾಜನಲ್ಲವಷ್ಟೆ?" ಎಂದಿತು.

ದೆವ್ವದ ಮಾತು ಕೇಳಿ ಅಲ್ಲಿ ಸೇರಿದವರೆಲ್ಲರೂ ಭಯಭ್ರಾಂತರಾದರು. ಮಂತ್ರಗಾರನು ಶೇಷಣ್ಣನನ್ನು ಆಶ್ಚರ್ಯಾತಿಶಯದಿಂದ ನೋಡಿದನು.

ಆಗ ಶೇಷಣ್ಣನು ಮಂತ್ರಗಾರನೊಂದಿಗೆ "ಹೌದು. ಸಿಂಗಹಾಡಿಯಿಂದ ಬಂದ ರಂಗರಾಜನೇ" ಎಂದನು.

ಮರುಕ್ಷಣದಲ್ಲಿ ದೆವ್ವವು ಕೀಚು ಕಂಠದಿಂದ, "ಅಯ್ಯಯ್ಯೊ! ಹಾಗಾದರೆ ನಾನು ಈ ಮನೆ ಮಾತ್ರ ಅಲ್ಲ, ಈ ಪ್ರಾಂತವನ್ನೇ ಬಿಟ್ಟು ಓಡಿಬಿಡುತ್ತೇನೆ!" ಎಂದು ಕೂಗಿತು.

ಮಂತ್ರಗಾರನು ಗರ್ವದಿಂದ ಮೀಸೆ ನೀವಿ ಎಲ್ಲರ ಕಡೆಗೂ ನೋಡಿ ತಲೆಯಾಡಿಸುತ್ತ, "ನೋಡಿದಿರಾ!

ನಾನು ಇನ್ನೂ ದೆವ್ವಕ್ಕೆ ಶಾಸ್ತಿ ಮಾಡುವ ಮಂತ್ರ ಪ್ರಾರಂಭಿಸಲೇ ಇಲ್ಲ! ನನ್ನನ್ನು ನೋಡಿಯೇ ಅದು ಹೆದರಿ ಸತ್ತಿದೆ!" ಎಂದನು.

ಅದನ್ನು ಕೇಳಿ ದೆವ್ವವು ದೊಡ್ಡ ದನಿಯಿಂದ ವಿಕಟಾಟ್ಟಹಾಸ ಮಾಡಿ, "ಮೂರ್ಖ ಮಂತ್ರಗಾರ! ನಾನು ಇಲ್ಲಿಂದ ಹೋಗಲು ಕಾರಣ ನಿನ್ನ ಮಂತ್ರ ತಂತ್ರ ಯಾವುದೂ ಅಲ್ಲ. ನನ್ನ ಹೆಸರು ಶಿವಯ್ಯ. ನಾನು ಬದುಕಿರುವಾಗ ಈ ರಂಗರಾಜನ ಪಕ್ಕದ ಮನೆಯಲ್ಲೇ ಇದ್ದೆ. ಇವನು ಕೊಡುವ ನರಕಯಾತನೆ ಚೆನ್ನಾಗಿ ಅನುಭವಿಸಿದೆ. ಇವನಿಂದಾಗಿ ನಾನು ನನ್ನ ಕುಟುಂಬದೊಂದಿಗೆ ಎಲ್ಲೆಲ್ಲೋ ತಿರುಗಿ ದಾರಿಯಲ್ಲಿ ಬಿದ್ದು ಸತ್ತೆ. ನೆರೆಹೊರೆಯವರಿಗೆ ಕಾಟ ಕೊಡುವವರು ಮನೆಹಿಡಿದು ಪೀಡಿಸುವ ದೆವ್ವ ಭೂತಗಳಿಗಿಂತಲೂ ಭಯಂಕರರು. ಅಂಥಾ ರಂಗ ರಾಜನು ಇಲ್ಲಿಗೆ ಬಂದಿದ್ದಾನೆಂದ ಮೇಲೆ ಈ ಸಂಗತಿ ಬೇಗದಲ್ಲೇ ನಿಮಗೆಲ್ಲ ತಿಳಿಯುತ್ತದೆ!" ಎಂದಿತು.

ಮರುಕ್ಷಣದಲ್ಲಿ ಮನೆಯ ನಡುವೆ ಒಂದು ಸುಳಿ ಗಾಳಿ ಎದ್ದಿತು. ಅದರ ಹೊಡೆತಕ್ಕೆ ಮಂತ್ರಗಾರನ ಮುಂದಿದ್ದ ಪೂಜಾ ಸಾಮಗ್ರಿಗಳೆಲ್ಲ ಮೇಲಕ್ಕೆ ಹಾರಿ ಮನೆಯೊಳಗೆಲ್ಲಾ ಚೆದರಿ ಬಿದ್ದುವು. ಮಂತ್ರಗಾರನು ಹೆದರಿ ನಡುಗಿ, ದೊಡ್ಡ ದನಿಯಿಂದ ಮಂತ್ರೋ ಚ್ಚಾರಣೆ ಪ್ರಾರಂಭಿಸಿದನು.

ಆಗಲೇ ಸುಳಿಗಾಳಿ ಕಿಟಕಿಯ ಕಂಬಿಗಳನ್ನು ರಾಚಿ ಕೊಂಡು ಹೊರಕ್ಕೆ ಓಡಿಹೋಯಿತು.

ಅಲ್ಲಿ ಕೂಡಿದವರಲ್ಲಿ ಕೆಲವರು ರಂಗರಾಜನನ್ನು ನೋಡಿ ಗುಸುಗುಸು ಮಾತಿಗೆ ಪ್ರಾರಂಭಿಸಿದರು.

ಇದನ್ನು ಗಮನಿಸಿದ ರಂಗರಾಜನು, "ಅಂದ ಹಾಗೆ ದೆವ್ವವು ಹೇಳಿದ ರಂಗರಾಜನು ಒಂದುವೇಳೆ ನಾನೇನೋ ಎಂಬ ಶಂಕೆಯಾಗುತ್ತಿದೆ. ಇದಾವುದೋ ಮನೆಹಾಳು ದೆವ್ವದಂತಿದೆ. ಮನುಷ್ಯರಲ್ಲಿ ಸ್ವಲ್ಪ ಮಟ್ಟಿಗಾದರೂ ಪ್ರಾಮಾಣಿಕತೆ ಇರುವ ಈ ದಿನ ಗಳಲ್ಲಿ ದೆವ್ವಗಳ ಪ್ರಾಮಾಣಿಕತೆಯನ್ನು ನಂಬು ವಂತಿಲ್ಲ. ಜಗಳಗಂಟಿಗಳೇ ಹೀಗೆ ದೆವ್ವವಾಗೋದು" ಎಂದನು.

"ಹೌದೌದು, ಹಾಗೆ ಹೇಳಿದ್ದು ಶಿವಯ್ಯನ ದೆವ್ವವೋ ಸೀನಯ್ಯನ ದೆವ್ವವೋ! ನಮಗೇನು ಗೊತ್ತು! ಮಂತ್ರವಾದಿಯ ಶಕ್ತಿಯನ್ನು ಕಡಿಮೆ ಮಾಡಲು ಅದಕ್ಕೆ ಗೊತ್ತಿದ್ದ ಹೆಸರು ಅದು ಹೇಳಿರ ಬೇಕು" ಎಂದನು ಗುಂಪಿನಲ್ಲಿದ್ದವನೊಬ್ಬ.

ಜನರು ಅವರವರ ದಾರಿ ಹಿಡಿಯುತ್ತಿರಲು, ರಂಗ ರಾಜನು ಅವಮಾನದ ಭಾರದಿಂದ ತಲೆ ತಗ್ಗಿಸಿ ಕೊಂಡು ಹಿಂದಿರುಗಿದನು. ಆಮೇಲೆ ಅವನು ನೆರೆ ಹೊರೆಯವರಿಗೆ ಸಹಾಯಮಾಡುತ್ತಾ, ಅವನೂ ಒಬ್ಬ ಒಳ್ಳೆಯ ನೆರೆಮನೆಯವನೇ ಆದನು.






## ೭

[ ಉಗ್ರಾಕ್ಷನ ಕೈಗೆ ಸಿಕ್ಕಿದ ಅಮರಪಾಲನು ಚಿತ್ರಸೇನನೊಂದಿಗೆ ಜ್ವಾಲಾದ್ವೀಪ ವಾಸಿಗಳ ಬಗ್ಗೆ ಕೆಲವು ರಹಸ್ಯಗಳನ್ನು ಹೇಳಿದನು. ರಾಜದ್ರೋಹಿಯಾದ ನಾಗವರ್ಮನ ವಿಷಯದಲ್ಲಿ ಕೆಲವು ರಹಸ್ಯಗಳು ಅವನಿಂದ ತಿಳಿದು ಬಂದಿತು. ಆ ದ್ರೋಹಿಗೆ ಸಹಾಯಮಾಡುವ ಹುಲಿರಾಯರುಗಳನ್ನೂ, ಅವರ ಭಯಂಕರ ಪಕ್ಷಿಗಳನ್ನೂ ಬೆಂಕಿಹಚ್ಚಿ ಸುಟ್ಟು ಸರ್ವನಾಶ ಮಾಡುವೆನೆಂದು ಅಮರಪಾಲನು ಹೇಳಿದನು. —ಮುಂದೆ ಓದಿರಿ ]

ಅಮರಪಾಲನು ಹೇಳುವ ಮಾತುಗಳನ್ನು ಚಿತ್ರಸೇನನು ಮನಸ್ಸುಗೊಟ್ಟು ಕೇಳುತ್ತಾ ಇದ್ದು, ತನ್ನ ಹಾಗೆಯೇ ನೀನೂ ಕೇಳಿದೆಯಷ್ಟೇ ಎಂಬ ಅರ್ಥದಲ್ಲಿ ಉಗ್ರಾಕ್ಷನ ಮುಖವನ್ನು ನೋಡಿದನು. ಅಮರಪಾಲನು ಹೇಳುವ ಮಾತುಗಳನ್ನು ಕಿವಿಗೊಟ್ಟು ಕೇಳುತ್ತಿದ್ದ ಉಗ್ರಾಕ್ಷನಿಗೆ ಅವನ ಮಾತಿನಲ್ಲಿ ಗಟ್ಟಿ ನಂಬುಗೆಯುಂಟಾದುದರಿಂದ ತೃಪ್ತಿಯಿಂದ ತಲೆಯಾಡಿಸಿದನು.

ಅವನು ಉತ್ಸಾಹದಿಂದ ಎದ್ದುನಿಂತು, " ಹುಂ. ನನ್ನ ಸೇವಕರಾದ ರಾಕ್ಷಸರಲ್ಲಿ ಇಬ್ಬರು ಮೂವರನ್ನು ಜತೆಗೆ ಕಳುಹಿಸುತ್ತೇನೆ. ಈ ಕೆಲಸ ಸರಿಯಾಗಿ ನೆರವೇರಿದರೆ ಅಮರಪಾಲನನ್ನು ದೊಡ್ಡ ರೀತಿಯಲ್ಲಿ ಸನ್ಮಾನಿಸುತ್ತೇನೆ " ಎಂದನು.

ಚಿತ್ರಸೇನನು ಸ್ವಲ್ಪ ಆಲೋಚನೆ ಮಾಡಿ, " ಕೆಲಸದೊಂದಿಗೆ ಕೆಲಸವಾಗಿ ಆ ಕಪಿಲಪುರವನ್ನು ಕೂಡಾ ಆಕ್ರಮಿಸಿಕೊಂಡರೆ ಚೆನ್ನಾಗಿರುತ್ತದಷ್ಟೆ ? ರಾಜನನ್ನು ಹಿಡಿದು ಸೆರೆಯಲ್ಲಿಟ್ಟ ನಾಗವರ್ಮನು ನನ್ನ ತಂದೆಯ ರಾಜ್ಯವಾದ ಧವಳಗಿರಿಯನ್ನು ಕೂಡಾ ಹಿಡಿಯಲು ದಾಳಿಮಾಡಿದನು. ಬಹುಶಃ ಈಗ ಕಪಿಲಪುರವನ್ನು ರಕ್ಷಿಸಲಿಕ್ಕೆ ದೊಡ್ಡ ಸೈನ್ಯವೇನೂ ಇರಲಿಕ್ಕಿಲ್ಲ. ಆದುದ



ರಿಂದ ನಾವು ಹಠಾತ್ತಾಗಿ ದೊಡ್ಡ ರಭಸ ತೋರಿಸಿ ದಾಳಿ ಮಾಡಿಬಿಟ್ಟರೆ ಸುಲಭವಾಗಿ ಕಪಿಲಪುರದ ಕೋಟೆಯನ್ನು ವಶಪಡಿಸಿಕೊಳ್ಳಬಹುದೆಂದು ನನಗೆ ತೋರುತ್ತದೆ" ಎಂದನು.

"ನಿಜ ನಿಜ!" ಎನ್ನುತ್ತಾ ಉಗ್ರಾಕ್ಷನು ಸಂತೋಷದಿಂದ ಹಾರಿಬಿದ್ದು, "ಬಹು ಪಸಂದಾದ ಆಲೋಚನೆ ಚಿತ್ರಸೇನಾ! ನಾವು ಕಪಿಲಪುರವನ್ನು ವಶಪಡಿಸಿಕೊಳ್ಳುವುದಷ್ಟೇ ಅಲ್ಲ, ವೀರಸಿಂಹ ಮಹಾರಾಜನ ಕುಮಾರಿ ಕಾಂತಿಮತಿಯನ್ನು ಕೂಡಾ ನಾಗವರ್ಮನ ಕೈಗೆ ಸಿಕ್ಕಿ ಬೀಳದಂತೆ ಕಾಪಾಡಿಬಿಡಬೇಕು. ನೀನು ಯುವಕನಷ್ಟೇ ಅಲ್ಲ, ಬ್ರಹ್ಮಚಾರಿ ಬೇರೆ. ಒಂದೇ ಏಟಿಗೆ ನಿನ್ನ ರಾಜ್ಯವು ಎರಡು ಪಾಲಿನಷ್ಟು ದೊಡ್ಡದಾಗಿ, ಅತ್ಯಂತ ಸುಂದರಿಯಾದ ರಾಜಕುಮಾರಿ ಕೂಡಾ ನಿನ್ನ ಹೆಂಡತಿಯಾಗುತ್ತಾಳೆ. ಇದು ನಮಗೆಲ್ಲರಿಗೂ ಸಂತೋಷದ ಸಂಗತಿ!" ಎಂದನು ನಗುತ್ತಾ.

ಉಗ್ರಾಕ್ಷನ ಮಾತುಗಳು ಚಿತ್ರಸೇನನಿಗೆ ಅಸಹ್ಯವೆನಿಸಿತು. ಕಪಿಲಪುರದ ರಾಜನಾದ ವೀರಸಿಂಹನು ಬದುಕಿರುವಾಗಲೇ, ಅವನ ರಾಜ್ಯವನ್ನು ತನ್ನ ರಾಜ್ಯದೊಂದಿಗೆ ಸೇರಿಸಿಕೊಳ್ಳುವುದಾಗಲೀ, ಅವನ ಕುಮಾರಿಯನ್ನು ತಂದೆಯ ಅನುಮತಿ ಇಲ್ಲದೆಯೇ ಮದುವೆ ಮಾಡಿಕೊಳ್ಳುವುದಾಗಲೀ ನ್ಯಾಯವಲ್ಲವೆಂಬುದು ಉಗ್ರಾಕ್ಷನಂತಹ ರಾಕ್ಷಸನಿಗೆ ತಿಳಿಯದು. ಇಷ್ಟುಹೊತ್ತಿಗೆ ಕಾಂತಿಮತಿ ಬೇರೊಬ್ಬನನ್ನು ಆರಿಸಿಕೊಂಡಿದ್ದರೂ ಇರಬಹುದು. ರಾಕ್ಷಸನಾದ ಉಗ್ರಾಕ್ಷನಿಗೆ ಮಾನವರು ಪಾಲಿಸುವ ಒಳ್ಳೆಯ ಮರ್ಯಾದೆಗಳು ಗೊತ್ತಿಲ್ಲದಿದ್ದರೆ ಆಶ್ಚರ್ಯವೇನಿಲ್ಲ. ಇರಲಿ. ಅದು ಆಮೇಲಿನ ಮಾತು.

"ಉಗ್ರಾಕ್ಷಾ! ಈಗ ನಮ್ಮ ಪ್ರಯತ್ನವು ನಾಗವರ್ಮನನ್ನು ಓಡಿಸಬೇಕಾದ್ದೇ. ಆ ರೀತಿಯಲ್ಲಿ ನಮ್ಮ ಪಕ್ಕೆಯಲ್ಲಿ ಶೂಲದಂತಿರುವ ಒಬ್ಬ ದುಷ್ಟನ ಪೀಡೆ ಬಿಡುಗಡೆಯಾಗಬೇಕು. ಕಪಿಲಪುರ ರಾಜ್ಯಕ್ಕೆ ಮತ್ತೆ ವೀರಸಿಂಹನನ್ನು ರಾಜನಾಗಿರುವಂತೆ ಮಾಡಬೇಕು. ಇಷ್ಟೆಲ್ಲಾ ಸಾಧಿಸಬೇಕಾದರೆ ಮೊದಲು ನಾವು ಆ ಭಯಂಕರ ಪಕ್ಷಿಗಳನ್ನೂ, ಅದರ ಮೇಲೆ ಸವಾರಿ ಮಾಡುವವರನ್ನೂ ಕಡೆಗಾಣಿಸಬೇಕು. ಅವರು ಆ ರಾಜ್ಯಗಳ ಸರಿಹದ್ದಿನಲ್ಲಿರುವಾಗ ನಾವು ಎಷ್ಟು ಸೈನ್ಯದೊಂದಿಗೆ ಹೋದರೂ ಕಪಿಲಪುರವನ್ನು ವಶಪಡಿಸಿಕೊಳ್ಳಲಾರೆವು. ಅದರ ಮೇಲೆ ನಾವೇ ಅವರಲ್ಲಿ ಸಿಕ್ಕಿಬಿದ್ದು ಸಾಯಬೇಕಾದೀತು! ಈ ಸಂಗತಿಯನ್ನು ಮರೆಯಲೇಬಾರದು. ಆತುರಪಟ್ಟು ಏನೋ ಆಗಿಹೋದಂತೆ ಊಹಿಸಿ ಸಂತೋಷಿಸಲೂ ಬಾರದು. ಅವರನ್ನು ಹತಮಾಡಿದ ಮೇಲೆಯೇ ನಾವು ಸಂತೋಷಪಡುವುದರಲ್ಲಿ ಅರ್ಥವಿದೆ" ಎಂದನು ಚಿತ್ರಸೇನ.

"ಆ ಬಾಧ್ಯತೆಯನ್ನು ನನ್ನ ಮೇಲೆ ಹಾಕಿಬಿಡಿರಿ. ನೀವು ಸೈನ್ಯಗಳೊಂದಿಗೆ ಕಾಡಿನೊಳಗೆ ಅಡಗಿ

10393

ಕೊಂಡಿದ್ದು ಭಯಂಕರ ಪಕ್ಷಿಗಳು ಕೊಟ್ಟಿಗೆಗಳಲ್ಲಿ ಸುಟ್ಟು ಸತ್ತಮೇಲೆ ಕಪಿಲಪುರದ ಮೇಲೆ ದಾಳಿ ಮಾಡಬಹುದು. ಆಮೇಲೆ ನಡೆಯುವಂಥವಕ್ಕೆ ಸಂದೇಹವೇ ಬೇಡ !" ಎಂದನು ಅಮರಪಾಲ.

ಇದಕ್ಕೆ ಚಿತ್ರಸೇನನೂ ಉಗ್ರಾಕ್ಷನೂ ಒಪ್ಪಿಕೊಂಡರು. ಕೂಡಲೇ ಅಮರಪಾಲನಿಗೆ ಜತೆಯಾಗಿ ಇಬ್ಬರು ರಾಕ್ಷಸರನ್ನೂ, ನಾಲ್ವರು ಚಿತ್ರಸೇನನ ಸೈನಿಕರನ್ನೂ ಕೊಡಲಾಯಿತು. ಅಮರಪಾಲನು ಅವರನ್ನು ಕರೆದುಕೊಂಡು ಬೇಗಬೇಗನೇ ಹೊರಟನು. ನೋಡುತ್ತಿದ್ದ ಹಾಗೆ ಅವರು ಕಾಡಿನ ಮರಗಳೆಡೆಯಲ್ಲಿ ಮಾಯವಾಗಿ ಹೋದರು.

ಚಿತ್ರಸೇನನೂ, ಉಗ್ರಾಕ್ಷನೂ ತಮ್ಮ ಸೈನ್ಯವನ್ನೂ, ಅನುಚರರನ್ನೂ ಒಟ್ಟುಗೂಡಿಸಲು ಭಟರ ಮೂಲಕ ಆಜ್ಞೆಗಳನ್ನು ಕಳುಹಿಸಿದರು. ಎಲ್ಲರಲ್ಲಿಯೂ ಒಂದು ಬಗೆಯ ಉತ್ಸಾಹದ ಚುರುಕುತನವೆದ್ದಿತು.

ಅತ್ತ ಅಮರಪಾಲನು, ತನ್ನೊಂದಿಗಿರುವ ಸೈನಿಕರನ್ನೂ, ರಾಕ್ಷಸರನ್ನೂ ಕರೆದುಕೊಂಡು ಹೋಗಿ ನಡು ಮಧ್ಯಾಹ್ನದ ಹೊತ್ತಿಗೆ ಕಪಿಲಪುರದ ಸಮೀಪವಿರುವ ಅಡವಿಯನ್ನು ಸೇರಿಕೊಂಡನು.

ಆ ಕಾಡಿನಲ್ಲಿಯೇ ಸುಮಾರು ನೂರು ರಕ್ಕಸ ಹಕ್ಕಿಗಳು ದೊಡ್ಡ ದೊಡ್ಡ ಕೊಟ್ಟಿಗೆಗಳಲ್ಲಿ ಕಟ್ಟಲ್ಪಟ್ಟಿದ್ದುವು. ಅವುಗಳನ್ನು ಕಾವಲು ಕಾಯುವವರು ಕೊಟ್ಟಿಗೆಗಳ ಸಮೀಪದ ಚಿಕ್ಕ ಚಿಕ್ಕ ಗುಡಿಸಲಿನಂಥ ಮನೆಗಳಲ್ಲಿದ್ದರು.

ಅಮರಪಾಲನು ತನ್ನ ಅನುಚರರೆಲ್ಲರನ್ನೂ ಒಂದುಕಡೆ ಸೇರಿಸಿ ಅವರಿಗೆ ಕಾವಲಿನವರ ಮನೆಗಳನ್ನು ತೋರಿಸುತ್ತ, "ನನಗೆ ಈ ಸ್ಥಳವೆಲ್ಲಾ ಚೆನ್ನಾಗಿ ಗೊತ್ತಿದೆ. ಆ ಕಾವಲಿನವರಲ್ಲಿ ಕೂಡಾ ಪ್ರತಿಯೊಬ್ಬನೂ ನನ್ನ ಗುರುತಿನವನೇ. ನಾನು ಮೊದಲು ಅವರ ಬಳಿಗೆ ಹೋಗಿ, ಅವರೆಲ್ಲರನ್ನೂ




ಒಂದು ಕಡೆಯಲ್ಲಿ ಸೇರಿಸಿ ನಿಮಗೆ ಸಂಜ್ಞೆಮಾಡಿಬಿಡುತ್ತೇನೆ. ಆ ಸಮಯದಲ್ಲಿ ನೀವು ಥಕ್ಕನೆ ಅವರ ಮೇಲೆ ಬಿದ್ದು ನಿರ್ದಾಕ್ಷಿಣ್ಯವಾಗಿ ಕೊಂದುಬಿಡಿ. ಆಮೇಲೆ ಭಯಂಕರ ರಕ್ಕಸ ಹಕ್ಕಿಗಳ ಕೊಟ್ಟಿಗೆಗಳಿಗೆ ಬೆಂಕಿ ಹಚ್ಚೋಣ" ಎಂದನು.

ಅದಕ್ಕೆ ಎಲ್ಲರೂ ಸರಿಯೆಂದು ಒಪ್ಪಿದರು. ಅನಂತರ ಅಮರಪಾಲನು ಕಾವಲಿನವರ ಗುಡಿಸಲಿನ ಕಡೆಗೆ ಓಡುತ್ತಾ, ಕೆಟ್ಟ ದನಿಯಿಂದ ವಿಕಾರವಾಗಿ ಕೂಗಿದನು.

ಅವನ ಕೂಗನ್ನು ಕೇಳಿ ಕಾವಲಿನವರು ಮನೆಗಳಿಂದ ಗಡಿಬಿಡಿಯಾಗಿ ಹೊರಗೆ ಓಡಿಬಂದರು. ಹಾಗೆ ಬಂದು ತೇಕುತ್ತಾ ನಿಂತ ಅಮರಪಾಲನನ್ನು ಮುತ್ತಿ ಏನು ಏನೆಂದು ಕೇಳತೊಡಗಿದರು. ಅವರೆಲ್ಲ ಒಟ್ಟು ಇಪ್ಪತ್ತೈದು ಮಂದಿಗಳಿದ್ದರು. ಅಮರಪಾಲನು ಬಹಳ ದೂರದಿಂದ ಓಡಿಬಂದ ಹಾಗೆ ಸ್ವಲ್ಪಹೊತ್ತು ಆಯಾಸ ನಟಿಸಿದನು.




"ಓಹ್ ! ನಮ್ಮ ಅಮರಪಾಲಾ ! ಬದುಕಿಯೇ ಇರುವೆಯಾ ? ನೀನು ಆ ರಾಕ್ಷಸರ ಕೈಗೆ ಸಿಕ್ಕಿ ಸತ್ತುಹೋದಿಯೆಂತಲೇ ಅಂದುಕೊಂಡಿದ್ದೆವು. ಹೇಗೆ ಬಂದಿ ? ಏನಾಯಿತು ? ಸಮೀಪದಲ್ಲಿ ಯಾರಾದರೂ ಓಡಿಸಿಕೊಂಡು ಬರುತ್ತಿದ್ದಾರೆಯೆ ?" ಎಂದರು ಅವರೆಲ್ಲ ಕುತೂಹಲದಿಂದ.

"ಸಾಯುವ ಅಂಚಿನಲ್ಲೇ ಇದ್ದೆ. ಆದರೆ ಭೂಮಿಯ ಋಣ ಇನ್ನೂ ಇದ್ದುದರಿಂದ ಜೀವದೊಂದಿಗೆ ಓಡಿ ಇಲ್ಲಿಗೆ ಬಂದುಬಿಟ್ಟೆ. ಇಷ್ಟು ಮಾಡಬೇಕಾದರೆ ಎಷ್ಟೆಲ್ಲಾ ಉಪಾಯ ಮಾಡಬೇಕಾಯಿತೋ ಆ ಪರಮಾತ್ಮನಿಗೇ ಗೊತ್ತು ! ನೀವೆಲ್ಲಾ ಹೇಗಿದ್ದೀರಿ ? ನಮ್ಮ ಪಕ್ಷಿಗಳಲ್ಲಿ ಒಂದು ಕೂಡಾ ಸಾಯದೆ ನಮ್ಮ ಕೊಟ್ಟಿಗೆಗಳಲ್ಲಿವೆಯಷ್ಟೇ ?" ಎಂದನು ಅಮರಪಾಲ ತೇಕುತ್ತಾ.

"ಅವೆಲ್ಲಾ ಸುರಕ್ಷಿತವಾಗಿವೆ. ನಾವೂ ಅಷ್ಟೇ. ಈಗ ನಾಗವರ್ಮ ಮಹಾರಾಜರು ಧವಳಗಿರಿಯ ಮೇಲೆ ದಂಡೆತ್ತಿಕೊಂಡು ಹೋಗಿದ್ದಾರೆ. ಆದ್ದರಿಂದ ಕಪಿಲಪುರದ ರಕ್ಷಕರೂ ಈಗ ನಾವೇ. ಕೋಟೆಯಲ್ಲಿ ಕೆಲವು ಮಂದಿ ಭಟರಷ್ಟೇ ಇದ್ದಾರೆ. ಅವರಾದರೂ ಕೋಟೆಯ ರಕ್ಷಣೆಗಿಂತಲೂ ರಾಜಕುಮಾರಿ ಕಾಂತಿಮತಿ ತಪ್ಪಿಸಿಕೊಂಡು ಹೋಗದಂತೆ ಕಾಯಲಿಕ್ಕೇ ಇರಿಸಲ್ಪಟ್ಟಿದ್ದಾರೆ. ಅವಳು ತಪ್ಪಿಸಿಕೊಂಡರೆ ನಮಗೆ ಅಧೋಗತಿಯೇ ! ನಾಗವರ್ಮ ರಾಜರು ಸರ್ವ ಸೈನ್ಯವನ್ನೂ ತೆಗೆದುಕೊಂಡು ಮೊದಲು ಧವಳಗಿರಿಯನ್ನೂ ಆಮೇಲೆ ಕಾಡಿನಲ್ಲಿರುವ ಚಿತ್ರಸೇನನ ಕೋಟೆಯನ್ನೂ ಆಕ್ರಮಿಸಿ, ಹೀಗೆಲ್ಲಾ ಒಂದು ವಿಜಯದ ಸುತ್ತು ಹಾಕಿ ಇಲ್ಲಿಗೆ ಬರುತ್ತಾರೆ ಬಿಡು. ಆಮೇಲೆ ನಾವು ಒಬ್ಬೊಬ್ಬರೂ ಒಂದೊಂದು ಸಾಮಂತ ರಾಜರೇ !" ಎಂದರು ಅವರು ಅತ್ಯಂತ ಉತ್ಸಾಹದ ಆವಸರದಿಂದ.

ಅವರು ಹೇಳುವುದನ್ನು ಕೇಳುತ್ತ ಅಮರಪಾಲನು ಅತ್ಯಾನಂದ ಪಡುವವನಂತೆ ದೊಡ್ಡ ದನಿಯಿಂದ ನಗುತ್ತ ಹಾರಿಕುಣಿದು ಕೈಗಳನ್ನು ಮೇಲೆತ್ತಿ ಪಟಪಟನೆ ತಟ್ಟಿ ಸಂಜ್ಞೆ ಮಾಡಿದನು. ಅದನ್ನೇ ಕಾಯುತ್ತಿದ್ದವರು ಒಮ್ಮೆಗೇ ಎದ್ದರು.

ಮರುಕ್ಷಣದಲ್ಲಿ ಮರಗಳ ಮರೆಯಿಂದ ಭಯಂಕರವಾಗಿ ಗರ್ಜಿಸಿಕೊಂಡು ರಾಕ್ಷಸರೂ, ಸೈನಿಕರೂ ಓಡುತ್ತಾ ಬಂದು ಆ ಕಾವಲಿನವರ ಗುಂಪಿನ ಮೇಲೆ ಬಿದ್ದರು.

ಅದೇ ರಭಸದಲ್ಲಿ ಅಮರಪಾಲನು ಕೂಡಾ ಕತ್ತಿ ಹಿರಿದು, ಜ್ವಾಲಾದ್ವೀಪ ವಾಸಿಗಳಾದ ಆ ಕಾವಲಿನವರನ್ನು ಕಡಿಯತೊಡಗಿದನು. ನಿರಾಯುಧರಾಗಿದ್ದ ಆ ಕ್ರೂರರು ನಿಮಿಷ ಮಾತ್ರದಲ್ಲಿ ಯಮಪುರಿಯನ್ನು ಸೇರಿಬಿಟ್ಟರು.

ಹಾಗೆ ಎಲ್ಲರೂ ಸತ್ತ ಮೇಲೆ ಅಮರಪಾಲನೇ ಮೊದಲಾದವರು ಮನೆಗಳೊಳಗೆ ತೂರಿ ಎಣ್ಣೆಯಲ್ಲಿ ಅದ್ದಿದ ದೊಂದಿಗಳನ್ನು ಬೆಳಗಿಸಿ ಭಯಂಕರ ಪಕ್ಷಿ




ಗಳನ್ನು ಕಟ್ಟಿಹಾಕಲ್ಪಟ್ಟ ಕೊಟ್ಟಿಗೆಗಳಿಗೆ ಎಲ್ಲಾ ಕಡೆಗಳಿಂದಲೂ ಬೆಂಕಿ ಹಚ್ಚಿದರು. ಗಾಳಿಯ ವೇಗದಲ್ಲಿ ಕೊಟ್ಟಿಗೆಗಳೆಲ್ಲಾ ಒಮ್ಮೆಗೇ ಉರಿಯತೊಡಗಿದುವು. ಭಗಭಗನೆ ಉರಿಯುವ ಬೆಂಕಿಗೂ, ಮೇಲಿಂದ ಉರಿದು ಬೀಳುವ ಕೆಂಡಗಳಿಗೂ ತಾಳಲಾಗದೆ, ಕಬ್ಬಿಣದ ಕಂಬಗಳಿಗೆ ಸಂಕಲೆಗಳಿಂದ ಬಿಗಿಯಲ್ಪಟ್ಟ ರಕ್ಕಸ ಹಕ್ಕಿಗಳು ಭಯಂಕರವಾಗಿ ಚೀರುತ್ತಾ, ಅಲ್ಲೇ ತಿರುಗುತ್ತಾ, ಬಿಡಿಸಿಕೊಳ್ಳಲು ಒದ್ದಾಡುತ್ತಿರುವಾಗ ಉರಿಯುವ ಇಡೀ ಮಾಡುಗಳು ಅವುಗಳ ಮೇಲೆ ಬಿದ್ದುವು. ಆದರೂ ತಮ್ಮ ರಕ್ಕಸ ಬಲದಿಂದ ಕಬ್ಬಿಣದ ಕಂಬಗಳನ್ನು ಮುರಿದು ಮೇಲೆ ಹಾರಿದ ಕೆಲವು ಪಕ್ಷಿಗಳು ಕೂಡಾ ರೆಕ್ಕೆಗಳು ಉರಿದು ಹೋಗಿ ಮತ್ತೆ ಕೆಳಗೇ ಬಿದ್ದು ತುಳ್ಳಾಡಿ ಪ್ರಾಣಬಿಟ್ಟುವು.

ಅಮರಪಾಲನೂ ಅವನ ಅನುಚರರೂ ಸಂತೋಷದಿಂದ ತಾಂಡವವಾಡುತ್ತ ಹಾಡತೊಡಗಿದರು. ಆಗ ಇದ್ದಕ್ಕಿದ್ದ ಹಾಗೆ ತುಸು ದೂರದಲ್ಲಿದ್ದೊಂದು ಗುಡ್ಡದ ಕಡೆಯಿಂದ ಭೇರಿಯ ಮೊಳಗು ಕೇಳ ತೊಡಗಿತು. ಎಲ್ಲರೂ ಗಕ್ಕನೆ ನಿಂತರು. ಅಮರಪಾಲನು ಆ ಕಡೆಗೆ ನೋಡುತ್ತ, "ಓ! ನಮ್ಮ ಚಿತ್ರಸೇನ ಮಹಾರಾಜರು, ಉಗ್ರಾಕ್ಷನೊಂದಿಗೆ ಬರುತ್ತಿದ್ದಾರೆ. ಇಲ್ಲಿ ನಾವು ಹಚ್ಚಿದ ಬೆಂಕಿ ಅವರ ಕಣ್ಣಿಗೆ ಬಿದ್ದಿರಬೇಕು. ಇನ್ನು ನಾವು ಕಪಿಲಪುರವನ್ನು ಆಕ್ರಮಿಸಿಬಿಡಬಹುದು. ನಿಮ್ಮಲ್ಲಿ ಒಬ್ಬಿಬ್ಬರು ಆ ಸೈನ್ಯಗಳಿಗೆ ಇದಿರಾಗಿ ಹೋಗಿ, ಇಲ್ಲಿಯ ಕೆಲಸ ಸರಿಯಾಗಿ ನಡೆಯಿತೆಂದು ಹೇಳಿಬಿಡಿರಿ. ಅವರಿಗೂ ಹೆಚ್ಚಿನ ಉತ್ಸಾಹ ಬರುತ್ತದೆ" ಎಂದನು.

ಕೂಡಲೇ ನಾವೇ ಹೋಗುತ್ತೇವೆಂದು ರಾಕ್ಷಸರಿಬ್ಬರೂ ಕಲ್ಲಿನ ಗದೆಯನ್ನು ತಿರುಗಿಸುತ್ತ, ದೊಡ್ಡ ದೊಡ್ಡ ಹಾರು ಹೆಜ್ಜೆಗಳಿಂದ ಪೊದೆಗಳ ಮೇಲೆ ಹಾರಿ ಹಾರಿ ಆ ಕಡೆಗೆ ಓಡಿದರು.

ಸ್ವಲ್ಪ ಹೊತ್ತಿಗೆ ಉಗ್ರಾಕ್ಷನೂ ಚಿತ್ರಸೇನನೂ ಸೈನ್ಯದೊಂದಿಗೆ ಅಲ್ಲಿಗೆ ಬಂದು ಸೇರಿದರು. ಅಮರಪಾಲನಿಂದಾದ ಬೀಭತ್ಸ ದೃಶ್ಯ ಅವರ ಕಣ್ಣೆದಿರೇ ಬಿದ್ದುಕೊಂಡಿದ್ದಿತು. ಇನ್ನೂ ಅಲ್ಲೀ ಇಲ್ಲಿ ಬೆಂಕಿಯೂ, ಹೊಗೆಯೂ, ಚಿಟಪಟ ಸದ್ದೂ ಹೊರಡುತ್ತಲೇ ಇದ್ದುವು. ಭಯಂಕರ ಪಕ್ಷಿಗಳೆಲ್ಲ ಸತ್ತ ರೀತಿಗಳನ್ನು ನೋಡಿ ಉಗ್ರಾಕ್ಷನು ಅಪರಿಮಿತ ಸಂತೋಷದಿಂದ ಅಮರಪಾಲನ ಹತ್ತಿರ ಬಂದು, ಅವನ ಕೈಗಳನ್ನು ಹಿಡಿದು ಮೇಲೆತ್ತಿ ಗಿರ್ರನೆ ತಿರುಗಿಸಿ, "ಆಹಾ! ಬುದ್ಧಿವಂತ ವೀರನೆಂದರೆ ನೀನೇ ಅಮರಪಾಲಾ! ನನ್ನ ಅರಣ್ಯಕ್ಕೆ ಶತ್ರುಭಯವಿಲ್ಲದಂತೆ ಮಾಡಿದಿ! ನಿನಗೆ ಏನು ಬೇಕೋ ಕೇಳು!" ಎಂದನು.

"ಅಯ್ಯೋ! ನಿನ್ನ ತಿರುಗಿಸುವಿಕೆಯಲ್ಲಿ ನನ್ನ ಗುಂಡಿಗೆ ನಿಲ್ಲುವುದಕ್ಕೆ ಮೊದಲೇ ಕೆಳಗಿಳಿಸಿ ಬಿಡು! ಅದೇ ಸಾಕು!" ಎಂದನು ಅಮರಪಾಲ ಆಯಾಸದಿಂದ ಉಬ್ಬಸಬಿಡುತ್ತ.



ಉಗ್ರಾಕ್ಷನು ಅವನನ್ನು ನೆಲದ ಮೇಲೆ ನಿಲ್ಲಿಸಿ ನಗುತ್ತ ಬೆನ್ನು ತಟ್ಟಿ, "ಒಂದೇ ಒಂದು ಭಯಂಕರ ಪಕ್ಷಿ ಕೂಡಾ ತಪ್ಪಿಸಿಕೊಳ್ಳದಂತೆ ಎಲ್ಲವನ್ನೂ ಸುಟ್ಟು ಹಾಕಿದಿಯಲ್ಲೋ. ಸುಟ್ಟ ಅವುಗಳ ಮಾಂಸದ ವಾಸನೆ ನಮ್ಮ ಮೂಗುಗಳಿಗೆ ಎಷ್ಟು ಸೊಗಸಾಗಿದೆ!" ಎಂದು ತನ್ನ ರಾಕ್ಷಸರಿಗೆ, ಅಂತಹುದನ್ನು ಹುಡುಕಿ ತಿನ್ನುವಂತೆ ಅನುಮತಿ ಕೊಟ್ಟನು. ರಾಕ್ಷಸರೂ ಉತ್ಸಾಹದಲ್ಲಿ ಆ ಕೆಲಸಕ್ಕೆ ತೊಡಗಿದರು.

"ಹೌದು. ಒಂದು ಪಕ್ಷಿ ಕೂಡಾ ತಪ್ಪಿಸಿಕೊಳ್ಳಲಿಲ್ಲ. ಕಾವಲಿನವರೂ ಸತ್ತರು. ಅವುಗಳ ಸವಾರರು ಕೆಲವರು ಇಲ್ಲಿ ಸುಮಾರು ಇಪ್ಪತ್ತು ಮಂದಿ ಸತ್ತಿರಬಹುದು. ಉಳಿದವರು ಕಪಿಲಪುರದಲ್ಲಿದ್ದಾರೆಂದು ನನ್ನ ಅನುಮಾನ. ಒಬ್ಬಿಬ್ಬರು ಅತ್ತಕಡೆ ಓಡಿದ ಹಾಗಿತ್ತು. ಆದರೂ ಅಂಥವರಿಂದ ಹೊಸ ಅಪಾಯ ಥಕ್ಕನೆ ಬರಲಿಕ್ಕಿಲ್ಲ" ಎಂದನು ಅಮರಪಾಲ.

"ಓಹ್! ಅವರು ಎಲ್ಲಿಗೆ ಓಡಿಯಾರು? ನಾವು ಕೋಟೆಯನ್ನು ಮುತ್ತಿ ಭಸ್ಮಮಾಡದೆ ಬಿಡುತ್ತೇವೆಯೇ? ಎಲ್ಲಕ್ಕೂ ಮೊದಲು ಚಿತ್ರಸೇನನು ಹೇಳಿದ ಹಾಗೆ ನಿನ್ನ ಸಹಾಯ ಬಹುದೊಡ್ಡದು" ಎಂದನು ಉಗ್ರಾಕ್ಷ.

"ಹಾಗೆಲ್ಲಾ ದುಡುಕಿಬಿಟ್ಟರೆ ರಾಜಕುಮಾರಿ ಕಾಂತಿಮತಿಗೆ ಕೇಡು ಬಂದೀತಯ್ಯಾ! ಆ ಕೋಟೆಯನ್ನು ಹಿಡಿಯುವ ಕೆಲಸವನ್ನು ನನಗೇ ಬಿಡು ಉಗ್ರಾಕ್ಷಾ" ಎಂದನು ಚಿತ್ರಸೇನ.

"ಹೌದಲ್ಲ! ಆ ಹುಡುಗಿಯ ಸಂಗತಿಯನ್ನೇ ಮರೆತೆನು. ಕೋಟೆಗೆ ಸ್ವಲ್ಪವೂ ಹಾನಿಬರಕೂಡದು. ಎಲ್ಲರೂ ಕೇಳಿರಿ. ಎಚ್ಚರಿಕೆ!" ಎಂದು ಉಗ್ರಾಕ್ಷನು ತನ್ನ ರಾಕ್ಷಸ ಸೇವಕರನ್ನು ನೋಡಿ ಕಣ್ಣು ತಿರುಗಿಸಿದನು.

"ಗೊತ್ತಾಯಿತು ನಾಯಕಾ! ಎಚ್ಚರದಿಂದಿರುತ್ತೇವೆ" ಎಂದರು ರಾಕ್ಷಸರೆಲ್ಲಾ ಏಕ ಕಂಠದಿಂದ.

ಅನಂತರ ಅಮರಪಾಲನ ನಾಯಕತ್ವದಲ್ಲಿ ಹತ್ತು ಮಂದಿ ಅಶ್ವಿಕ ಸೈನಿಕರು ಅನುಕೂಲ ಸಂಧಿ ನೋಡಿಕೊಂಡು ಬರಲು ಕಪಿಲಪುರದ ಕಡೆಗೆ ಕಳುಹಿಸಲ್ಪಟ್ಟರು. ಈಗ ಎಲ್ಲರಿಗೂ ಸಮಾಧಾನವಾಗಿತ್ತು. ಭಯ ಪೂರಾ ಹೋಗಿತ್ತು. ಸೈನಿಕರಿಗೆ ಹಸಿವೆ ಗೊತ್ತಾಗತೊಡಗಿತು. ಕೆಲವು ಸೈನಿಕರು ಅಡಿಗೆಯ ಕೆಲಸಗಳಿಗೆ ಪ್ರಾರಂಭಿಸಿದರು.

ಸೂರ್ಯನು ಪಶ್ಚಿಮಾಕಾಶದಲ್ಲಿ ಕೆಳಗಿಳಿಯಲು ತೊಡಗಿದನು. ಸೈನಿಕರು ಊಟ ಮುಗಿಸಿ ಮರಗಳ ನೆರಳಿನಲ್ಲಿ ಒರಗಿಕೊಂಡಿದ್ದರು.

ಆ ಸಮಯದಲ್ಲಿ ಕಪಿಲಪುರದ ಕಡೆಗೆ ಕಳುಹಿಸಲ್ಪಟ್ಟ ಅಶ್ವಿಕರಲ್ಲಿ ಒಬ್ಬನು ಹಿಂದಿರುಗಿ ಬಂದು, "ಮಹಾರಾಜಾ! ಅಪಾಯ ಬಂದಿದೆ. ಐವತ್ತು ಅರುವತ್ತು ಮಂದಿ ಹುಲಿರಾಯರುಗಳು ರಾಜಕುಮಾರಿಯನ್ನು ಮೇನೆಯಲ್ಲಿ ಕೂರಿಸಿ, ಕೋಟೆಯನ್ನು ಬಿಟ್ಟು ಕಾಡಿನೊಳಗೆ ಎಲ್ಲಿಗೋ ಹೊರಟ

ದ್ದಾರೆ. ಅವರೆಲ್ಲ ವೇಗವಾಗಿ ಓಡುವುದನ್ನು ನೋಡಿದರೆ ತಪ್ಪಿಸಿಕೊಂಡು ಹೋಗುವವರ ಹಾಗೆ ಕಾಣುತ್ತದೆ" ಎಂದು ಹೇಳಿದನು.

ಈ ಸುದ್ದಿ ಕೇಳಿದ ಕೂಡಲೇ ಚಿತ್ರಸೇನನೂ, ಉಗ್ರಾಕ್ಷನೂ ಮೆಟ್ಟಿಬಿದ್ದು ಹಾರಿನಿಂತರು. ಇಲ್ಲಿ ಭಯಂಕರ ಪಕ್ಷಿಗಳೆಲ್ಲ ಸತ್ತು ಹೋದ ಸಂಗತಿ ಕಪಿಲಪುರದ ಕೋಟೆಯಲ್ಲಿರುವ ಹುಲಿರಾಯರುಗಳಿಗೆ ತಿಳಿದಿರಬೇಕು. ಇಲ್ಲಿ ಎದ್ದಿರುವ ಬೆಂಕಿ-ಹೊಗೆಗಳಿಂದ ಅದು ತಿಳಿದಿದ್ದೀತು. ಇನ್ನು ಕೋಟೆಗೆ ರಕ್ಷಣೆ ಇಲ್ಲವೆಂದು ತಿಳಿದು ಅವರು ರಾಜಕುಮಾರಿಯನ್ನು ಎಲ್ಲಿಯೋ ಗುಡ್ಡದಲ್ಲಿ ಅಡಗಿಸಿಡಲು ಎತ್ತಿಕೊಂಡು ಹೋಗುತ್ತಿರಬೇಕು.

ಚಿತ್ರಸೇನನು ಹೀಗೆ ಊಹಿಸಿ ತನ್ನ ಸೈನಿಕರಲ್ಲಿ ಚುರುಕಾದ ಐವತ್ತು ಮಂದಿ ಯೋಧರನ್ನು ಆರಿಸಿ, ಉಗ್ರಾಕ್ಷನನ್ನೂ ಅವನ ಕೆಲವು ಮಂದಿ ಅನುಚರರನ್ನೂ ಕರೆದುಕೊಂಡು ರಾಜಕುಮಾರಿ ಕಾಂತಿಮತಿಯನ್ನು ಕಾಪಾಡಲು ಅಡ್ಡದಾರಿ ಹಿಡಿದು ಹೊರಟನು.

ಉಳಿದ ಸೈನ್ಯವೆಲ್ಲ ಅಮರಪಾಲನ ನಾಯಕತ್ವದಲ್ಲಿ ಕಪಿಲಪುರ ಕೋಟೆಯನ್ನು ವಶಪಡಿಸಿಕೊಳ್ಳಲು ಕೂಡಲೇ ಹೊರಡಬೇಕೆಂದು ಚಿತ್ರಸೇನನು ಆಜ್ಞೆ ಮಾಡಿದನು.

ಕಾಂತಿಮತಿಯ ಮೇನೆ ಹೋದ ದಿಕ್ಕನ್ನು ತಿಳಿದಿದ್ದ ಆಶ್ವಿಕನು ದಾರಿ ತೋರಿಸುತ್ತಿರಲು, ಸ್ವಲ್ಪಹೊತ್ತಿಗೆ ಚಿತ್ರಸೇನನು ತನ್ನ ಅನುಚರರೊಂದಿಗೆ ಹುಲಿರಾಯರುಗಳು ಹೋಗುತ್ತಿರುವಲ್ಲಿಗೆ ತಲುಪಿದನು.

ಆಶ್ವಿಕನು ಹೇಳಿದ ಹಾಗೆಯೇ ನಾಲ್ವರು ಬೋಯಿಗಳು ಮೇನೆಯನ್ನು ಹೊತ್ತು ಓಡುವಂತೆ ನಡೆಯುತ್ತಿದ್ದರು. ಅದರ ಮುಂದೆಯೂ, ಹಿಂದೆಯೂ ಕತ್ತಿ ಕಠಾರಿಗಳನ್ನು ಧರಿಸಿದ ಹುಲಿಚರ್ಮಧಾರಿಗಳು ನಡೆಯುತ್ತಿದ್ದರು.

ಚಿತ್ರಸೇನನ ಪರಿವಾರವು ಅವರ ಸಮೀಪಕ್ಕೆ ಹೋಗುವಷ್ಟರಲ್ಲಿ ಅವರೂ ನೋಡಿಬಿಟ್ಟರು. ಕೂಡಲೇ ಹುಲಿರಾಯರ ನಾಯಕನು ಕತ್ತಿಯನ್ನು ಮೇಲೆತ್ತಿ, ಭೀಕರವಾದ ಗರ್ಜನಾಧ್ವನಿಯಿಂದ, "ಮೇನೆಯನ್ನು ಕೆಳಗಿಳಿಸಿರೋ!" ಎಂದು ಕೂಗಿ, ತನ್ನ ಅನುಚರರನ್ನು ನೋಡಿ, "ನನ್ನ ಮಾತು ಕೂದಲಿನಷ್ಟೂ ತಪ್ಪಕೂಡದು! ನಮ್ಮ ಕಂಠದಲ್ಲಿ ಪ್ರಾಣವಿರುವಾಗ ಕಾಂತಿಮತಿ ಶತ್ರುಗಳ ಕೈಗೆ ಸಿಕ್ಕಕೂಡದು. ನಮ್ಮಲ್ಲಿ ಕೊನೆಯವನು ಸಾಯುವ ಮೊದಲು ಅವಳನ್ನು ಕೊಂದೇ ಸಾಯಬೇಕು. ಇದು ನಾಗವರ್ಮ ಮಹಾರಾಜರ ಆಜ್ಞೆ!" ಎಂದನು ಗಟ್ಟಿಯಾಗಿ.

—(ಇನ್ನೂ ಇದೆ)





# ಸಾಹಸವೀರ

ಕಥೆಗಳ ಭಂಡಾರದಂತಹ ಬೇತಾಳದ ಬೀಗದ ಕೈಯಂತಿರುವ ರಾಜಾ ತ್ರಿವಿಕ್ರಮನು, ಮತ್ತೆ ಬಿಡದೆ ಮರದ ಬಳಿಗೆ ತಿರುಗಿ ಹೋಗಿ, ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ, ತನ್ನ ಹೆಗಲ ಮೇಲೆ ಹಾಕಿಕೊಂಡು, ಎಂದಿನಂತೆ ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿದ್ದ ಬೇತಾಳವು ಮಾತಾಡಲು ತೊಡಗಿತು. "ರಾಜಾ, ಅಳ್ಳೆದೆಯವರ ಹೃದಯವನ್ನು ನಡುಗಿಸುವ ಈ ಹಾಳು ಮಸಣದ ನಟ್ಟಿರುಳಿನ ನಿಃಶಬ್ದತೆಯ ಹೊತ್ತಿನಲ್ಲಿ ನಿನ್ನನ್ನು ಇಂತಹ ಅಸಾಧ್ಯವಾದ ಕಾರ್ಯಕ್ಕೆ ಪ್ರೇರೇಪಿಸಿದವರು ನಿನಗಿಂತಲೂ ಬಲಿಷ್ಠರೂ, ಬುದ್ಧಿವಂತರೂ ಆಗಿರಬೇಕೆಂದು ನನ್ನ ನಂಬುಗೆ. ಲೋಕದಲ್ಲಿ ಕೆಲವರು ಮನುಷ್ಯರಿಗೆ ಎಲ್ಲಾ ಬಗೆಯಿಂದಲೂ ತಮಗಿಂತ ಕಡಿಮೆಯ ಸ್ಥಾನದಲ್ಲಿರುವವನನ್ನು ಮುಖಸ್ತುತಿಯಿಂದ ಮೈಮರೆಯುವಂತೆ ಮಾಡಿ, ಹಿಂದಿನಿಂದ ಅವನನ್ನು ನೋಡಿ ನಗುವುದು ಒಂದು ಬಗೆಯ ತೃಪ್ತಿ. ಮನುಷ್ಯರಿಗೆ ಮಾತ್ರವಲ್ಲ, ದೇವತೆಗಳಿಗೂ ರಾಕ್ಷಸರಿಗೂ ಇಂತಹ ಬುದ್ಧಿಯಿದೆ. ಇದಕ್ಕೆ ಉದಾಹರಣೆ

ಬೇತಾಳಕಥೆಗಳು



ಯಾಗಿ ನಿನಗೆ ಈಗ ಒಬ್ಬ ರಾಕ್ಷಸನ ಕಥೆಯನ್ನು ಹೇಳುತ್ತೇನೆ. ನನ್ನ ಭಾರವನ್ನು ಹೊತ್ತುಕೊಂಡು ನಡೆಯುವ ಕಷ್ಟ ತಿಳಿಯದಂತೆ ಕಥೆ ಕೇಳುತ್ತಾ ಸಾಗು" ಎಂದು ಹೇಳಿ ಕಥೆಯನ್ನು ಪ್ರಾರಂಭ ಮಾಡಿತು :

ಒಂದಾನೊಂದು ಕಾಲದಲ್ಲಿ ಚತುರಸೇನನೆಂಬ ಮಹಾರಾಜನು, ಪ್ರಪಂಚದೊಳಗಿನ ದೇಶಗಳನ್ನೆಲ್ಲಾ ಜಯಿಸಿ ಏಕಛತ್ರಾಧಿಪತ್ಯದ ಕೆಳಗೆ ತಂದು ಮಹಾ ಚಕ್ರವರ್ತಿ ಎನಿಸಿಕೊಂಡನು. ಹಾಗೆ ತಾನು ಜಯಿಸಿದ ಎಲ್ಲಾ ರಾಜ್ಯಗಳಿಗೂ ಸಮರ್ಥರಾದ ಪಾಲಕರನ್ನು ನಿಯಮಿಸಿ ಪ್ರಜಾರಂಜಕನೆಂಬ ಕೀರ್ತಿಯನ್ನೂ ಗಳಿಸಿದನು. ಎಲ್ಲರಿಗೂ ಅವನೆಂದರೆ ಬಹಳ ಅಭಿಮಾನವೆನಿಸಿತು. ಪ್ರಪಂಚದಲ್ಲೆಲ್ಲಿಯೂ ಯುದ್ಧ ಭಯವೆಂಬುದಿಲ್ಲದೆ ಶಾಂತಿ ನೆಲೆಸಿತ್ತು. ಅಂತಹ ಚತುರಸೇನನ ರಾಜಧಾನಿಯು ಹೆಸರು ರಂಗನಗರವೆಂದು ಖ್ಯಾತವಾಯಿತು.

ಯುದ್ಧದ ಭಯವಿಲ್ಲದೆ ಹೋದುದರಿಂದ ಉತ್ಸಾಹೀ ಯುವಕರೆಲ್ಲಾ ಲಲಿತಕಲೆಗಳು, ವ್ಯಾಪಾರ ಮುಂತಾದ ವೃತ್ತಿಗಳ ಕಡೆಗೆ ಆಕರ್ಷಿತರಾಗಿದ್ದರು. ಈ ಸಂಗತಿ ಚತುರಸೇನ ಚಕ್ರವರ್ತಿಗೆ ತಿಳಿಯಿತು. ದೇಶದೊಳಗಿನ ಯುವಕರು ಯುದ್ಧಕ್ಕೆ ಸಂಬಂಧಿಸಿದ ವ್ಯಾಯಾಮಾದಿಗಳನ್ನು ಪೂರ್ತಿ ನಿರಾಕರಿಸುವುದು ದೇಶಕ್ಕೆ ಕ್ಷೇಮವಲ್ಲವೆಂದು ಅವನಿಗೆ ತೋರಿತು. ಆದರಿಂದಾಗಿ ಒಂದು ವರ್ಷ ರಾಜನು ರಾಜಧಾನಿಯಲ್ಲಿ ಶಸ್ತ್ರಾಸ್ತ್ರ ವಿದ್ಯೆಗಳ ಒಂದು ಸ್ಪರ್ಧೆಯನ್ನು ಏರ್ಪಡಿಸಿದನು.

ಆ ಸ್ಪರ್ಧೆಯಲ್ಲಿ ಭಾಗವಹಿಸಲು ಪ್ರಪಂಚದೊಳಗಿನ ನಾಲ್ಕು ದಿಕ್ಕುಗಳಿಂದಲೂ ಅನೇಕ ಯುವಕರು ಬಂದರು. ಅವರು ತಂಗಲಿಕ್ಕಾಗಿ ನಗರದ ಪರಿಸರಗಳಲ್ಲಿ ಅನೇಕ ಶಿಬಿರಗಳನ್ನು ನಿರ್ಮಿಸಲಾಯಿತು. ಎಲ್ಲರಲ್ಲಿಯೂ ಒಂದು ಹೊಸ ಉತ್ಸಾಹ.

ಸ್ಪರ್ಧೆ ಪ್ರಾರಂಭವಾಗಲು ಇನ್ನು ಎರಡು ದಿನಗಳು ಇವೆಯೆಂದಿರುವಾಗ, ರಂಗನಗರದೊಳಗೆ ತಾಳೇ ಮರದಷ್ಟು ಎತ್ತರವುಳ್ಳ ರಾಕ್ಷಸನೊಬ್ಬನು ಪ್ರವೇಶ ಮಾಡಿದನು. ಅವನನ್ನು ನೋಡಿ ಎಲ್ಲರೂ ಹೆದರಿ ಚೆಲ್ಲಾಪಿಲ್ಲಿಯಾಗಿ ಓಡತೊಡಗಿದರು.

ಆದರೆ ಆ ರಾಕ್ಷಸನು ಯಾರತಂಟೆಗೂ ಹೋಗದೆ ನಗರದ ಮಧ್ಯದಲ್ಲಿ ನಿಂತುಕೊಂಡು, ಕಿವಿ ಒಡೆದು ಹೋಗುವಂತೆ ದೊಡ್ಡದೊಂದು ಬೊಬ್ಬೆಹಾಕಿ, ಮಹಾರಾಜನನ್ನು ಕರೆದನು. ಮಹಾ ಸಾಹಸಿಯಾದ ಚತುರಸೇನನು ಕೂಡಾ ಆ ಭೀಕರಾಕಾರವನ್ನು ನೋಡಿ ಹೆದರಿ ನಡುಗದಿರಲಿಲ್ಲ.

ರಾಜನನ್ನು ನೋಡಿ ಆ ರಾಕ್ಷಸನು "ಎಲೋ ರಾಜಾ ! ನಾನೀಗ ಮನಸ್ಸು ಮಾಡಿದರೆ ಈ ಮಹಾ ನಗರವನ್ನು ಕ್ಷಣಮಾತ್ರದಲ್ಲಿ ನೆಲಮಟ್ಟ ಮಾಡಿಬಿಡಬಲ್ಲೆನು. ಆದರೆ ಹಾಗೆಲ್ಲಾ ಮಾಡಲು ನನಗೆ ಇಷ್ಟವಿಲ್ಲ. ಕೇಳು. ನಾನು ದಿನಾ ಇದೇ ಸಮಯಕ್ಕೆ



ಇಲ್ಲಿಗೆ ಬರುತ್ತೇನೆ. ಬಲಿಷ್ಠನೂ, ಆರೋಗ್ಯಶಾಲಿಯೂ ಆದ ಇಬ್ಬರು ಮನುಷ್ಯರನ್ನು ನನಗೆ ಒಪ್ಪಿಸಿಬಿಡು. ಅವರಿಂದ ನನ್ನ ಹಸಿವೆ ತೀರಿಸಿಕೊಂಡು ತೃಪ್ತನಾಗುತ್ತೇನೆ. ನೀವೂ ಉಳಿಯುವಿರಿ" ಎಂದನು ಗುಡುಗಿನಂತಹ ಧ್ವನಿಯಿಂದ.

ಬೇರೆ ದಾರಿ ಕಾಣದೆ ಚತುರಸೇನ ರಾಜನು ಕೂಡಲೇ ರಾಕ್ಷಸನ ಮಾತಿಗೆ ತನ್ನ ಅಂಗೀಕಾರವನ್ನು ತಿಳಿಸಿದನು.

ಆ ದಿನ ಆ ರಾಕ್ಷಸನು ತನಗೆ ತೋರಿದ ಇಬ್ಬರು ಮಹಾಕಾಯರಾದ ಮನುಷ್ಯರನ್ನು ಆರಿಸಿ ಎತ್ತಿಕೊಂಡು ನಗರದಿಂದ ಹೊರಗೆ ಹೋಗಿಬಿಟ್ಟನು.

ರಾಕ್ಷಸನು ಹೊರಟುಹೋದ ಕೂಡಲೇ ಚತುರಸೇನನು ತನ್ನ ಮಂತ್ರಿಗಳನ್ನೆಲ್ಲಾ ಕರೆಯಿಸಿದನು. ಎಲ್ಲರೂ ಕೂಡಿ ಈ ರಾಕ್ಷಸನ ಪೀಡಾ ಪರಿಹಾರಕ್ಕೆ ಏನು ಮಾಡಬಹುದೆಂದು ಚರ್ಚೆಮಾಡಲು ತೊಡಗಿದರು. ಕಡೆಗೆ ಒಂದು ನಿರ್ಣಯಕ್ಕೆ ಬಂದು, ಅದರಂತೆ ಮಾಡಲು ದೇಶದೊಳಗೆಲ್ಲಾ ಒಂದು ಡಂಗುರ ಸಾರಿಸಿದರು. ಅದೇನೆಂದರೆ, ಈ ಮೊದಲು ನಿಶ್ಚಯಿಸಿದ ಪ್ರಕಾರ ಯುದ್ಧ ವಿದ್ಯೆಗಳಲ್ಲಿ ಸ್ಪರ್ಧೆಯನ್ನು ನಿಲ್ಲಿಸಲಾಗಿದೆ. ಅದಕ್ಕೆ ಬದಲಾಗಿ ಹೊಸತಾಗಿ ಬಂದಿರುವ ರಾಕ್ಷಸನನ್ನು ಕೊಲ್ಲುವ ವೀರನಿಗೆ ಚಕ್ರವರ್ತಿಯವರು ಬಹು ದೊಡ್ಡ ಸನ್ಮಾನ ಮಾಡುತ್ತಾರೆ.

ಈ ಡಂಗುರವನ್ನು ಕೇಳಿ ಸ್ಪರ್ಧೆಗಾಗಿ ಬಂದು ಶಿಬಿರಗಳಲ್ಲಿ ತಂಗಿದ್ದ ಕೆಲಮಂದಿ ಯುವಕರು ರಾಜನ ಬಳಿಗೆ ಬಂದು, "ಪ್ರಭುಗಳೇ, ಈ ರಾಕ್ಷಸನ ಶಕ್ತಿ ಅಪಾರ. ಆಲದ ಮರವನ್ನು ಬೇರುಗಳೊಂದಿಗೆ ಕಿತ್ತು ಆಚೆಗೆ ಬೀಸುವಂಥವನು. ನದಿಯ ನೀರನ್ನೆಲ್ಲಾ ಒಂದೇ ಉಸಿರಿಗೆ ಹೀರಿಬಿಡುವಂಥವನು. ಅವನ ಮೇಲೆ ವೀರರಾದ ಮಾನವರನ್ನು ಕಳುಹಿಸಿ, ಅವನನ್ನು ರೊಚ್ಚಿಗೆಬ್ಬಿಸುವುದರಿಂದ ಪ್ರಯೋಜನವಿಲ್ಲ. ಬದಲಾಗಿ ಬಹಳ ಅನರ್ಥವೇ ಉಂಟಾದೀತು" ಎಂದು ಹೇಳಿದರು.

ಆ ರಾಕ್ಷಸನ ಸಮಾಚಾರವು ಅನೇಕ ಮಂದಿ ಯುವಕರಿಗೆ ಗೊತ್ತಿದ್ದಿತು. ಅವನು ಪ್ರಪಂಚದೊಳಗಿನ ದೇಶಗಳಲ್ಲಿ ತಿರುಗುತ್ತ ಕಡೆಗೆ ಈ ರಂಗನಗರಕ್ಕೆ ಬಂದಿದ್ದಾನೆಂದು ಗೊತ್ತಾಗಿತ್ತು. ಈ ಸಂಗತಿ ಚತುರಸೇನ ರಾಜನಿಗೂ ಈಗ ಗೊತ್ತಾಯಿತು.

"ಕಣ್ಣು ಬಿಡಿಸಿಕೊಂಡು ನೋಡುತ್ತಾ ನನ್ನ ಪ್ರಜೆಗಳನ್ನು ಹೇಗೆ ರಾಕ್ಷಸನಿಗೆ ಬಲಿಗೊಡಲಿ?" ಎಂದನು ಚತುರಸೇನನು ವಿಚಾರಭಾರದಿಂದ.

"ಪ್ರಭುಗಳೇ, ಈ ರಾಕ್ಷಸನು ನಿತ್ಯಸಂಚಾರಿಯಾಗಿರುವವನು. ಇಂಥವನು ಇಲ್ಲಿ ಬಹಳ ಕಾಲ ಇರುವವನೇನಲ್ಲ. ಆದುದರಿಂದ ಇವನ ಕಾಟ ನಿಮಗೆ ತಾತ್ಕಾಲಿಕವಾಗಿಯಷ್ಟೇ ಇರತ್ತದೆ. ಲಕ್ಷಗಟ್ಟಲೆ ಪ್ರಜೆಗಳನ್ನು ಕಾಪಾಡಲಿಕ್ಕಾಗಿಯೂ, ನಗರದೊಳಗಿನ ಕಟ್ಟಡಗಳನ್ನು ಉಳಿಸಿಕೊಳ್ಳಲಿಕ್ಕಾಗಿಯೂ



ತಾತ್ಕಾಲಿಕವಾಗಿ ಕೆಲವು ನೂರು ಮಂದಿ ಪ್ರಜೆಗಳ ಪ್ರಾಣಗಳು ಹೋದರೂ ಅಷ್ಟು ದೊಡ್ಡ ನಷ್ಟವೇನಿಲ್ಲ. ನಮ್ಮ ದೇಶದೊಳಗಿನ ಪ್ರತಿನಿಧಿಗಳು ಹಾಗೆಯೇ ಮಾಡಿದ್ದಾರೆ" ಎಂದರು ಬೇರೆ ಬೇರೆ ದೇಶಗಳಿಂದ ಬಂದ ಆ ಯುವಕರು.

ಚತುರಸೇನನು ಖಿನ್ನಮುಖದವನಾಗಿ, ಆ ಯುವಕರನ್ನೆಲ್ಲಾ ಹೋಗಲು ಹೇಳಿ ತಾನು ತೀವ್ರಾಲೋಚನೆಗೆ ಬಿದ್ದನು.

ಮರುದಿನ ರಾಕ್ಷಸನು ಅದೇ ಹೊತ್ತಿಗೆ ರಂಗನಗರಕ್ಕೆ ಬಂದು, ಮುಂದೆ ನಿಲ್ಲಿಸಲಾಗಿದ್ದ ಇಬ್ಬರು ಬಲಶಾಲಿಗಳನ್ನು ಎತ್ತಿಕೊಂಡು ತನ್ನ ಪಾಡಿಗೆ ಹೊರಟು ಹೋಗಿಬಿಟ್ಟನು.

ಚಕ್ರವರ್ತಿಯಾಗಿರುವ ತನ್ನ ಅಸಹಾಯಕತೆಯನ್ನು ನೆನೆದು ಮಹಾರಾಜನಿಗಾದ ದುಃಖವು ಅಷ್ಟಿಷ್ಟೆಂದು ಹೇಳಲು ಸಾಧ್ಯವಿಲ್ಲ. ಅವನು ಮತ್ತೊಂದು ಸಾರಿ ಮಂತ್ರಿಗಳನ್ನೆಲ್ಲಾ ಸಮಾವೇಶಗೊಳಿಸಿ. "ನನ್ನ ಪ್ರಜೆಗಳನ್ನು ಈ ರೀತಿಯಲ್ಲಿ ರಾಕ್ಷಸನಿಗೆ ಸಮರ್ಪಿಸಲು ನನ್ನಿಂದಾಗದು. ನೀವುಗಳು ಇದಕ್ಕೊಂದು ಪರಿಷ್ಕಾರದ ಮಾರ್ಗವನ್ನು ತೋರಿಸಲೇಬೇಕು. ಇಲ್ಲದಿದ್ದರೆ ನಾನೇ ಸ್ವತಃ ಅವನೊಂದಿಗೆ ಹೋರಾಡಲು ನಿಲ್ಲುತ್ತೇನೆ. ಅವನು ಪ್ರಜೆಗಳನ್ನು ಎತ್ತಿಕೊಳ್ಳುವ ಚೆಂದವನ್ನು ಹೇಡಿಯಂತೆ ನೋಡುತ್ತಿರಲು ಸಾಧ್ಯವಿಲ್ಲ. ಕ್ಷತ್ರಿಯ ವೀರನಾಗಿ ಮಹಾ ಚಕ್ರವರ್ತಿಯೆನಿಸಿದ ನನ್ನಿಂದಂತೂ ಸಾಧ್ಯವೇ ಇಲ್ಲ" ಎಂದನು.

ಚತುರಸೇನನು ರಾಕ್ಷಸನೊಂದಿಗೆ ಹೋರಾಡಲು ನಿಲ್ಲುವುದೆಂದರೆ, ಆತ್ಮಹತ್ಯ ಮಾಡಿಕೊಳ್ಳುವುದಕ್ಕೆ ಸಮಾನವೇ ಎಂದು ಮಂತ್ರಿಗಳಿಗೆ ತೋರಿತು. ಅವರೆಲ್ಲಾ ಚೆನ್ನಾಗಿ ಆಲೋಚನೆ ಮಾಡಿ, ಮಹಾ ಮಂತ್ರಗಾರನಾದ ಸಾಂಬಕನನ್ನು ಬರಮಾಡಿಸಿ ಕೊಂಡರು.

ಸಾಂಬಕನು ಅಂಜನ ಹಾಕಿ ನೋಡಿ, "ಇದೇನು ಅದ್ಭುತವೋ ! ಆ ರಾಕ್ಷಸನ ಶಕ್ತಿಯನ್ನು ಅಂದಾಜು ಮಾಡಿಕೊಳ್ಳಲು ಸಾಧ್ಯವಾಗದಿದೆ. ನಾನು ಇಲ್ಲಿಯೇ ಇದ್ದು, ನನ್ನ ಮಂತ್ರಶಕ್ತಿಯಿಂದ ಅವನೊಂದಿಗೆ ಹೋರಾಡುತ್ತೇನೆ. ಅದೃಷ್ಟವು ಚೆನ್ನಾಗಿದ್ದರೆ ಅವನು ಅಂತರಿಸಿ ಹೋಗುತ್ತಾನೆ. ಇಲ್ಲದೇ ಹೋದರೆ ನನ್ನ ಪ್ರಾಣ ಹೋಗುತ್ತದೆ" ಎಂದನು ಮಂತ್ರಿಗಳ ಮಧ್ಯದಲ್ಲಿ.

ತನ್ನ ಜೀವದಾಶೆ ಬಿಟ್ಟೇ ಸಾಂಬಕನು ಈ ಕಾರ್ಯಕ್ಕಿಳಿಯುವ ಸಾಹಸ ಮಾಡಿದ್ದಾನೆಂದು ಮಂತ್ರಿಗಳಿಗೆ ಖಚಿತವಾಯಿತು. ಅವನ ತ್ಯಾಗಕ್ಕೆ ಮೆಚ್ಚಿ ಬೇಕಾದುದನ್ನೆಲ್ಲಾ ಒದಗಿಸಿಕೊಟ್ಟರು.

ಆ ದಿನ ರಾತ್ರಿಯೇ ಸಾಂಬಕನು ಆ ರಾಕ್ಷಸನ ಮೇಲೆ ತನ್ನ ಮಂತ್ರಶಕ್ತಿಯನ್ನು ಪ್ರಯೋಗಿಸಲೆಳಸಿ, ಪೂಜಾ ಮಂದಿರವನ್ನು ಶುಭ್ರಪಡಿಸಿದನು.

ಆಮೇಲೆ ರಂಗೋಲಿಯ ಪದ್ಮಚಿತ್ರ ಬರೆದು, ಅದರ ನಡುವೆ ಶಕ್ತೀ ವಿಗ್ರಹವನ್ನು ಪ್ರತಿಷ್ಠೆಮಾಡಿ,

ಅದರ ಮುಂದೆ ತಾನು ಪದ್ಮಾಸನಸ್ಥನಾಗಿ ಕುಳಿತು ಮಂತ್ರೋಚ್ಚಾರಣೆಗೆ ಪ್ರಾರಂಭಿಸಿದನು. ಪೂಜೆಯ ಕಟ್ಟಕಡೆಯಲ್ಲಿ ಅವನು ಬೆವರಿ ಒದ್ದೆಯಾದನು.

ಮರುದಿನ ರಾಕ್ಷಸನು ಬಂದು ಎಂದಿನಂತೆ ಮತ್ತಿಬ್ಬರು ಬಲಶಾಲಿಗಳನ್ನು ಎತ್ತಿಕೊಂಡು ಅವನ ಪಾಡಿಗೆ ಹೋಗಿಬಿಟ್ಟನು. ಮಾಂತ್ರಿಕನ ಮಂತ್ರದ ಪರಿಣಾಮ ಅವನನ್ನೇನೂ ಮಾಡಿದಂತೆ ಕಾಣಲಿಲ್ಲ. ಮಂತ್ರವಾದಿ ತಲೆ ತಗ್ಗಿಸಿಕೊಂಡು ಹೋದನು. ಚತುರಸೇನನು ಹತಬುದ್ಧನಂತಾದನು.

ಮಂತ್ರಿಗಳೆಲ್ಲಾ ಸೇರಿ ಮತ್ತೆ ಚರ್ಚೆಗೆ ಪ್ರಾರಂಭಿಸಿದರು. ಈ ಸಾರಿ ಅವರು ಅಪರ ಧನ್ವಂತರಿ ಎಂದು ಹೆಸರು ಪಡೆದ ರಾಜವೈದ್ಯನನ್ನು ಕರೆಯಿಸಿ, "ಅಯ್ಯಾ, ನಿಮಗೆ ಪ್ರಾಣಗಳನ್ನು ಉಳಿಸುವಂತಹ ಮದ್ದುಗಳಷ್ಟೇ ಅಲ್ಲದೆ, ಪ್ರಾಣ ತೆಗೆಯುವಂತಹ ವಿಷಗಳ ಸಂಗತಿಯೂ ಗೊತ್ತಿರಬೇಕಷ್ಟೆ? ವಿಷ ಪ್ರಯೋಗದಿಂದ ರಾಕ್ಷಸನ ಪ್ರಾಣ ಹೋಗುವಂತೆ ಮಾಡಬಲ್ಲಿರಾ?" ಎಂದರು.

"ಎಂತಹ ಬಲಶಾಲಿಯನ್ನಾದರೂ ಕ್ಷಣಮಾತ್ರದಲ್ಲಿ ಕೊಲ್ಲಬಲ್ಲಂತಹ ಕಾಲಕೂಟ ವಿಷದ ಸಂಗತಿ ನನಗೆ ಗೊತ್ತಿದೆ" ಎಂದನು ರಾಜವೈದ್ಯ.

"ಆ ವಿಷದಿಂದ ರಾಕ್ಷಸನು ಸಾಯುವನೆ?" ಎಂದು ಮಂತ್ರಿಗಳು ಕೇಳಿದರು.

ರಾಜವೈದ್ಯನು ನಕ್ಕು, "ಆ ವಿಷದಿಂದ ಸಾಯದಿದ್ದವನನ್ನು ಮತ್ತೆ ಯಾವ ವಿಷವೂ ಕೊಲ್ಲಲಾರದು" ಎಂದನು ರಾಜವೈದ್ಯ.

ಆ ದಿನ ರಾತ್ರಿಯಲ್ಲಿ ರಾಜವೈದ್ಯನು ಕಾಲಕೂಟ ವಿಷವನ್ನು ತಯಾರುಮಾಡಿ ಮಂತ್ರಿಗಳ ಕೈಗೆ ಕೊಟ್ಟನು. ಅವರು ಅದನ್ನು ಮರುದಿನ ರಾಕ್ಷಸನಿಗೆ ಆಹಾರವಾಗುವಂತಹ ಬಲಶಾಲಿಗಳ ಕೈಗೆ ಕೊಟ್ಟು, "ಇದನ್ನು ನೀವು ಮುಷ್ಟಿಯೊಳಗೆ ಇಟ್ಟುಕೊಂಡಿರಬೇಕು, ನಿಮ್ಮೊಂದಿಗೇ ರಾಕ್ಷಸನ ಶರೀರದೊಳಗೆ ಈ ವಿಷವೂ ಹೋಗುತ್ತದೆ. ನೀವು ಸತ್ತರೂ ರಾಕ್ಷಸನ ಪ್ರಾಣಗಳನ್ನು ತೆಗೆದ ಘನತೆ ನಿಮಗೆ ಬರುತ್ತದೆ. ಸೂರ್ಯಚಂದ್ರರಿರುವವರೆಗೂ ಪ್ರಜೆ





ಗಳು ನಿಮ್ಮನ್ನು ಮರೆಯಲಾರರು" ಎಂದು ಹೇಳಿದರು. ಅವರೂ ಅದಕ್ಕೆ ಒಪ್ಪದೆ ಬೇರೆ ಉಪಾಯವಿರಲಿಲ್ಲ.

ಮರುದಿನ ಎಂದಿನಂತೆ ರಾಕ್ಷಸನು ಬಂದನು. ಎಲ್ಲರಿಗಿಂತ ಮುಂದೆ ನಿಂತಿದ್ದ ಬಲಶಾಲಿಗಳಿಬ್ಬರನ್ನೂ ಎತ್ತಿಕೊಂಡು ಹೋದನು.

ಅವರಿಬ್ಬರನ್ನು ತಿನ್ನುವಾಗ ಅವರ ಮುಷ್ಟಿಯೊಳಗಿದ್ದ ಕಾಲಕೂಟದಂತಹ ವಿಷವೂ ರಾಕ್ಷಸನ ಹೊಟ್ಟೆಯೊಳಗೆ ಹೋಯಿತು.

ಆದರೆ ವಿಷವು ಅವನಿಗೆ ಯಾವ ಕೇಡೂ ಮಾಡಲಿಲ್ಲ. ಅವನ ಜೀರ್ಣಶಕ್ತಿ ಬಹಳ ದೊಡ್ಡದಾಗಿಯೇ ಇದ್ದಿತು. ಆದರ ಮರುದಿನ ಕೂಡಾ ಆ ರಾಕ್ಷಸನು ಎಂದಿನಂತೆ ಬಂದೇ ಬಂದು, ಮತ್ತಿಬ್ಬರನ್ನು ಕೂಡಾ ಎತ್ತಿಕೊಂಡು ಹೋಗಿ ತಿಂದನು. ಇವನೆಂತಹ ರಾಕ್ಷಸನಪ್ಪಾ, ಎಂದು ಎಲ್ಲರೂ ಮೂಗಿನ ಮೇಲೆ ಬೆರಳಿಟ್ಟುಕೊಂಡರು.

ಹೀಗೆಲ್ಲಾ ಆದಮೇಲೆ ಚತುರಸೇನನು ತನ್ನ ಮಂತ್ರಿಗಳನ್ನೂ, ಬಂಧುಗಳನ್ನೂ, ಹೆಂಡತಿ ಮಕ್ಕಳನ್ನೂ ಒಟ್ಟುಗೂಡಿಸಿ, ಅವರನ್ನೆಲ್ಲಾ ನೋಡಿ, "ಪ್ರಪಂಚದೊಳಗಿನ ಎಲ್ಲಾ ದೇಶಗಳನ್ನೂ ಜಯಿಸಿ ನಾನು ಚಕ್ರವರ್ತಿಯಾದೆನು. ಇಷ್ಟು ಕಾಲ ಯಾರ ಮುಂದೆಯೂ ತಲೆಬಾಗಿದವನಲ್ಲ. ಈಗ ಒಬ್ಬ ರಾಕ್ಷಸನು ನನ್ನನ್ನು ಅಸಹಾಯಕನನ್ನಾಗಿ ಮಾಡಿ ನನ್ನ ಪ್ರಜೆಗಳನ್ನು ಕೊಂದು ತಿಂದು ಹೋಗುತ್ತಿದ್ದಾನೆ. ಅವನು ಹಾಗೆ ತನ್ನಿಚ್ಛೆಯಂತೆ ಮಾಡುತ್ತಿದ್ದಾಗ, ಅದನ್ನು ನೋಡುತ್ತಾ ಇರುವ ನನಗೆ ಸಿಂಹಾಸನದ ಮೇಲೆ ಕುಳಿತುಕೊಳ್ಳುವ ಅರ್ಹತೆ ಇಲ್ಲ. ನಾಳೆ ನಾನೇ ಅವನ ಬಲ ನೋಡಿಬಿಡುತ್ತೇನೆ. ಅಥವಾ ನಾನೇ ಅವನಿಗೆ ಬಲಿಯಾಗುತ್ತೇನೆ. ಇನ್ನು ಸುಮ್ಮನಿರಲು ಸಾಧ್ಯವಿಲ್ಲ. ಯಾರೂ ಏನೂ ಹೇಳಬೇಡಿರಿ! ಎಂದೋ ಒಂದು ದಿನ ಮರಣ ಕಟ್ಟಿಟ್ಟ ಗಂಟು ತಾನೆ?" ಎಂದನು.

ಇದು ಬೇಕೆಂದು ಕೇಳಿ ಮರಣ ತಂದುಕೊಂಡ ಹಾಗೆಯೇ ಎಂದು ಎಲ್ಲರೂ ಚತುರಸೇನನಿಗೆ ಸಮಾಧಾನ ಮಾಡಲು ನೋಡಿದರು. ಅದೇನೂ ಪ್ರಯೋಜನವಿಲ್ಲದೆ ಹೋಯಿತು.

"ಈ ರಾಕ್ಷಸನನ್ನು ಕೊಂದರೇನೇ ನಾನು ಚಕ್ರವರ್ತಿಯಾಗಲು ಅರ್ಹನಾಗುವೆನು. ನನ್ನನ್ನು ಅವನು ಕೊಂದರೆ ನನ್ನ ಪ್ರಜೆಗಳ ದೌರ್ಭಾಗ್ಯವನ್ನು ಕಣ್ಣಾರೆ ನೋಡುವ ಸಂಕಟ ನನಗೆ ತಪ್ಪುತ್ತದೆ" ಎಂದನು ಚತುರಸೇನ.

ಮರುದಿನ ಆ ರಾಕ್ಷಸನು ಬಂದ ಕೂಡಲೇ ಚತುರಸೇನನು ಅವನ ಇದಿರಿಗೆ ಹೋಗಿ, "ಎಲೋ ರಾಕ್ಷಸಾ! ನಾನು ಈ ಭೂಮಂಡಲವನ್ನೆಲ್ಲಾ ಜಯಿಸಿ ಚಕ್ರವರ್ತಿ ಅನ್ನಿಸಿಕೊಂಡ ಚತುರಸೇನ ಮಹಾರಾಜನು. ಈಗ ನೀನು ನನ್ನನ್ನೇ ಶಾಸಿಸುತ್ತಿರುವಿ. ಈಗ ನಾನು ನಿನ್ನೊಂದಿಗೆ ಯುದ್ಧಕ್ಕೆ

ನಿಂತಿದ್ದೇನೆ. ನಾನು ಜಯಿಸಿದರೆ ನನ್ನ ಪ್ರಜೆಗಳಿಗೆ ನಿನ್ನ ಪೀಡೆ ನಿವಾರಣೆಯಾಗುತ್ತದೆ. ನೀನು ಗೆದ್ದರೆ ಈ ರಾಜ್ಯದ ಹಕ್ಕು ಭುಕ್ತಿ ಪೂರಾ ನಿನ್ನದಾಗುತ್ತದೆ! ನೋಡಿಕೋ!" ಎಂದು ಕತ್ತಿ ಹಿರಿದನು.

"ಹೋರಾಡುವುದು ವೀರನ ಲಕ್ಷಣ. ಜಯಾಪಜಯವು ದೈವಾಧೀನ" ಎಂದು ಚತುರಸೇನನು ರಾಕ್ಷಸನ ಅಂಗೈಯ ಮೇಲೆ ಕತ್ತಿಯಿಂದ ಬಲವಾಗಿ ಹೊಡೆದನು.

ಆ ಪೆಟ್ಟಿಗೆ ಅಂಗೈಯಲ್ಲಿ ಮುಳ್ಳು ಚುಚ್ಚಿದಂತೆ ಚಿಕ್ಕ ಗಾಯವಾಗಿ ರಕ್ತ ಸೋರತೊಡಗಿತು. ರಾಕ್ಷಸನು ಅದನ್ನು ಲಕ್ಷ್ಯ ಮಾಡದೆ ರಾಜನ ಕೈಯಲ್ಲಿದ್ದ ಕತ್ತಿಯನ್ನು ಎಳೆದುಕೊಂಡು ಆಚೆಗೆ ಬಿಸುಟು, "ಎಲೋ ಚಕ್ರವರ್ತೀ! ನಿನ್ನ ಸಾಹಸಕ್ಕೆ ಮೆಚ್ಚಿದೆನಯ್ಯ. ಈ ಭೂಮಂಡಲದಲ್ಲಿ ನಿನ್ನಂತಹ ವೀರನು ಮತ್ತೊಬ್ಬ ನಿಲ್ಲವೆಂಬುದು ನಿರೂಪಣವಾಯಿತು. ನಿನ್ನನ್ನು ನೋಡಿದುದಕ್ಕೆ ನನಗೆ ಬಹಳ ಸಂತೋಷವಾಗಿದೆ. ನಾನು ಬಂದ ಕೆಲಸ ನಿನ್ನಿಂದ ಮುಗಿಯಿತು. ಇನ್ನು ನಾನು ಈ ಭೂಮಿಯನ್ನು ಬಿಟ್ಟು, ಹೊರಟು ಹೋಗುತ್ತೇನೆ" ಎಂದನು.

ಆ ಮಾತು ಕೇಳಿ ಚತುರಸೇನನು ಆಶ್ಚರ್ಯಪಡುತ್ತ "ನಿಜಕ್ಕೂ ನೀನು ಯಾರಪ್ಪಾ? ನಮ್ಮ ದೇಶಕ್ಕೆ ಏತಕ್ಕಾಗಿ ಬಂದೆ? ಈಗ ಏತಕ್ಕಾಗಿ ಹೊರಟು ಹೋಗುತ್ತೇನೆನ್ನುವೆ?" ಎಂದು ಕೇಳಿದನು.

ಅದಕ್ಕೆ ರಾಕ್ಷಸನು, "ನನ್ನದು ಪಾತಾಳ ಲೋಕ. ಅಲ್ಲಿ ನಾನು ಎಲ್ಲಾ ವಿದ್ಯೆಗಳಲ್ಲಿಯೂ ತೇರ್ಗಡೆಯಾಗಿದ್ದೇನೆ. ನನ್ನ ದೇಶದಲ್ಲಿ ನನ್ನನ್ನು ಸೋಲಿಸುವವರು ಯಾರೂ ಇಲ್ಲದೆ ಹೋದರು. ಪಾತಾಳದ ರಾಜನು ಕೂಡಾ ನನ್ನ ಪರಾಕ್ರಮವನ್ನು ಮೆಚ್ಚಿ ಪಾತಾಳ ಲೋಕಕ್ಕೆ ನನ್ನನ್ನು ಸೈನ್ಯಾಧಿಪತಿಯಾಗಿ ಮಾಡುತ್ತೇನೆಂದನು. ನನ್ನನ್ನು ಮೀರಿಸುವ ವೀರನೊಂದಿಗೆ ಕೈ ಕಲೆಸುವವರೆಗೂ ನಾನು ಎಲ್ಲಿಯೂ ಸ್ಥಿರವಾಗಿ ಇರಲಾರೆನೆಂದು ರಾಜನೊಂದಿಗೆ ಹೇಳಿ ಕೊಂಡೆನು. ಆಗ ಅವನು ನನ್ನೊಂದಿಗೆ, ಭೂಲೋಕ



ಸಂಚಾರ ಮಾಡಿದರೆ ನನ್ನ ಇಚ್ಛೆ ನೆರವೇರುತ್ತದೆಂದು ಹೇಳಿದನು. ಅಂತಲೇ ಭೂಲೋಕಕ್ಕೆ ಹೊರಟು ಬಂದೆನು. ಇಲ್ಲಿ ಎಷ್ಟು ನಗರಗಳಲ್ಲಿ ತಿರುಗಿದರೂ ನನ್ನನ್ನು ಇದಿರಿಸುವ ವೀರನೇ ಇಲ್ಲದೆ ಹೋದನು. ಇಷ್ಟು ಕಾಲದ ಮೇಲೆ ಅಂತಹ ಮಹಾವೀರನಾಗಿ ನೀನು ಬಂದಿರುವಿ. ನನ್ನ ಇಚ್ಛೆ ನೆರವೇರಿತು. ಇನ್ನು ಪಾತಾಳ ಲೋಕಕ್ಕೆ ಹೋಗಿ ಬಿಡುತ್ತೇನೆ" ಎಂದು ಹೇಳಿ ಬೇಗ ಬೇಗನೆ ಅಲ್ಲಿಂದ ಹೊರಟುಹೋದನು.

ಬೇತಾಳವು ಹೀಗೆ ಕಥೆಯನ್ನು ಹೇಳಿ ಮುಗಿಸಿ, "ರಾಜಾ, ಕತ್ತಿ ಹಿರಿದು ತನ್ನ ಮೇಲೆ ಬರುವ ಚತುರಸೇನನನ್ನು ರಾಕ್ಷಸನು ನಿರಾಯಾಸವಾಗಿ ಎತ್ತಿ ತನ್ನ ಅಂಗೈಯಲ್ಲಿ ಇಟ್ಟುಕೊಂಡಿದ್ದಾನೆ. ಚತುರಸೇನನ ಕತ್ತಿಯ ಪೆಟ್ಟಿನಿಂದ ಅವನಿಗೆ ಮುಳ್ಳು ಚುಚ್ಚಿದಷ್ಟು ಕೂಡಾ ನೋವಾಗಲಿಲ್ಲ. ಹಾಗಿದ್ದೂ ಚತುರಸೇನನನ್ನು ಆ ರಾಕ್ಷಸನು ತನ್ನನ್ನು ಮೀರಿಸುವ ವೀರನೆಂದು ಹೊಗಳಿದ್ದು ಮುಖಸ್ತುತಿ ತಾನೆ? ಆ ಬಗೆಯ ಮುಖಸ್ತುತಿ ಅವಹೇಳನೆ ಮಾಡಿದಂತೆ ತಾನೇ! ಇದಕ್ಕೆ ತಕ್ಕ ಉತ್ತರವು ಗೊತ್ತಿದ್ದೂ ಹೇಳದೆಹೋದರೆ ನಿನ್ನ ತಲೆ ನೂರು ಹೋಳುಗಳಾಗಿ ಒಡೆಯುತ್ತದೆ!" ಎಂದು ಸುಮ್ಮನಾಯಿತು. ಅದಕ್ಕೆ ತ್ರಿವಿಕ್ರಮನು ಹೀಗೆ ಉತ್ತರ ಕೊಟ್ಟನು:

"ಆ ರಾಕ್ಷಸನಿಗೆ ಪಾತಾಳ ಲೋಕದ ರಾಜನು ಸೈನ್ಯಾಧಿಪತಿ ಪದವಿ ಕೊಡುವೆನೆಂದಿದ್ದಾನೆ. ಇದರಿಂದ ಏನು ತಿಳಿಯುತ್ತದೆಂದರೆ, ರಾಜನು ರಾಕ್ಷಸನಿಗಿಂತ ಬಲವಂತನೂ ವೀರನೂ ಆಗಿರದಿದ್ದರೆ ತಾನೇ ರಾಜನನ್ನು ಸೋಲಿಸಿ ಪಾತಾಳಕ್ಕೆ ರಾಜನಾಗುತ್ತಾನೆ. ಅಂದರೆ ತನಗಿಂತ ಹೆಚ್ಚಿನ ವೀರನನ್ನು ಇದಿರಿಸುವ ಸಾಹಸವು ರಾಕ್ಷಸನಿಗೆ ಇಲ್ಲವೆಂದಾಯಿತು. ಚತುರಸೇನನು ಹಾಗಲ್ಲ, ರಾಕ್ಷಸನು ಎಲ್ಲಾ ವಿಧದಲ್ಲಿಯೂ ತನಗಿಂತ ಬಲಿಷ್ಠನೆಂದು ತಿಳಿದು ಕೂಡಾ ಅವನನ್ನು ಇದಿರಿಸಿ ನಿಂತಿದ್ದಾನೆ. ಅದೇ ನಿಜವಾದ ವೀರನ ಲಕ್ಷಣ. ಶಕ್ತಿಗೆ ತಕ್ಕಷ್ಟು ಹೋರಾಡಬಲ್ಲವನು ಸಾಮಾನ್ಯ ವೀರನು, ಶಕ್ತಿಗೆ ಮಿಂಚಿ ಹೋರಾಡುವವನು ಮಹಾ ಸಾಹಸವೀರನು. ಇದನ್ನು ತಿಳಿದುಕೊಂಡ ರಾಕ್ಷಸನು ಸಾಹಸದಲ್ಲಿ ತಾನು ಚತುರಸೇನನನ್ನು ಮೀರಿಸಲಾರೆನೆಂದು ತಿಳಿದುಕೊಂಡನು. ಆದುದರಿಂದಲೇ ಅವನು ಚತುರಸೇನನನ್ನು ಅಭಿನಂದಿಸಿ ಪಾತಾಳಕ್ಕೆ ಹೋಗಿಬಿಟ್ಟನು. ಅವನ ಮಾತಿನಲ್ಲಿ ಮುಖಸ್ತುತಿಯೋ, ಅವಹೇಳನೆಯೋ ಸ್ವಲ್ಪ ಕೂಡಾ ಇಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವಸಮೇತ ಮಾಯವಾಗಿ ಹೋಗಿ ಎಂದಿನಂತೆ ಮರದ ಕೊಂಬೆಯಲ್ಲಿ ನೇತಾಡತೊಡಗಿತು.






ನಮ್ಮ ದೇವಾಲಯಗಳು :

# ಚಾಮುಂಡೇಶ್ವರಿ

ಒಂದಾನೊಂದು ಕಾಲದಲ್ಲಿ ಬಹು ಭಯಂಕರನಾದ ಮಹಿಷಾಸುರನೆಂಬ ರಾಕ್ಷಸನು ವಿಜೃಂಭಿಸಿ, ಕ್ರಮಕ್ರಮವಾಗಿ ಮೂರು ಲೋಕಗಳನ್ನೂ ಜಯಿಸಿಕೊಂಡು ಹೋದನು.

ದೇವತೆಗಳು ಅವನೊಂದಿಗೆ ಎಷ್ಟೋ ಸಾರಿ ಯುದ್ಧ ಮಾಡಿದರು. ಆದರೆ ಪ್ರತಿಸಾರಿಯೂ ಮಹಿಷಾಸುರನೇ ಜಯಿಸುತ್ತಿದ್ದನು. ಅವನ ದಾರುಣ ಕೃತ್ಯಗಳಿಂದ ಭೂಲೋಕವು ಗಡಗಡ ನಡುಗಿಕೊಂಡಿದ್ದಿತು. ಅವನು ದಿನದಿಂದ ದಿನಕ್ಕೆ ಗರ್ವದಿಂದ ಹೆಚ್ಚಳಿಸಿಕೊಂಡೇ ಇದ್ದನು.





ಆ ರಾಕ್ಷಸನ ಪೀಡೆಯನ್ನು ಪರಿಹರಿಸಬೇಕೆಂದು ದೇವತೆಗಳೆಲ್ಲಾ ವಿಷ್ಣುವನ್ನು ಪ್ರಾರ್ಥಿಸಿಕೊಂಡರು. ವಿಷ್ಣು ಒಂದು ಯಜ್ಞ ಮಾಡುವಂತೆ ಅವರೊಂದಿಗೆ ಹೇಳಿದನು. ಅದರಂತೆ ದೇವತೆಗಳು ಯಜ್ಞ ಮಾಡಿ ಯಜ್ಞ ಕುಂಡದ ಸುತ್ತಲೂ ಕುಳಿತು ಪ್ರಾರ್ಥನೆ ಮಾಡತೊಡಗಿದರು. ಅವರ ಪ್ರಾರ್ಥನೆ ಫಲಿಸಿತು. ಯಜ್ಞ ಕುಂಡದಿಂದ ದುರ್ಗಾದೇವಿ ಪ್ರತ್ಯಕ್ಷಳಾದಳು.



ಶಿವನು ತನ್ನ ಶೂಲವನ್ನು ದುರ್ಗಾದೇವಿಗೆ ಪ್ರಸಾದಿಸಿದನು. ಇಂದ್ರನು ವಜ್ರಾಯುಧವನ್ನು ಕೊಟ್ಟನು. ಹಾಗೆಯೇ ಹಲವು ದೇವತೆಗಳಿಂದ ದುರ್ಗಾದೇವಿ ಹಲವು ವಿಧಗಳ ಆಯುಧಗಳನ್ನೂ, ಶಕ್ತಿಗಳನ್ನೂ ಗ್ರಹಿಸಿ, ಅದ್ಭುತವಾದ ಸಿಂಹವನ್ನು ಅಧಿರೋಹಿಸಿ ವಿಂಧ್ಯ ಪರ್ವತಗಳ ಕಡೆಗೆ ಪ್ರಯಾಣ ಮಾಡಿದಳು.

ದುರ್ಗಾದೇವಿಯ ಗಂಭೀರವಾದ ಸೌಂದರ್ಯದ ವರ್ಣನೆಯನ್ನು ಕೇಳಿದ ಮಹಿಷಾಸುರನು, ಅವಳನ್ನು ದೂರದಿಂದ ನೋಡಿ, ಆ ದಿವ್ಯ ಸೌಂದರ್ಯಕ್ಕೆ ಮುಗ್ಧನಾಗಿ ತನ್ನನ್ನು ವರಿಸಿ ಕೊಳ್ಳುವಂತೆ ಅವಳಿಗೆ ಸಂದೇಶ ಕಳುಹಿಸಿದನು. ಅದಕ್ಕೆ ಅವಳು ನಿರಾಕರಣೆ ತೋರಿಸಲು, ಅವನಿಗೆ ಕೋಪ ಬಂದಿತು.





ಮಹಿಷಾಸುರನ ಅನುಚರರು ದುರ್ಗಾದೇವಿಯ ಬೆಂಬತ್ತಿ ಅವಳನ್ನು ಹಿಡಿಯಲು ನೋಡಿದರು. ಆಗ ಅವಳ ಪೆಟ್ಟಿನಿಂದ ಅವರೆಲ್ಲಾ ಹತರಾದರು. ಕೊನೆಗೆ ಮಹಿಷಾಸುರನೇ ಅವಳನ್ನು ಇದಿರಿಸಿದನು. ದುರ್ಗಾದೇವಿ ಲೋಕ ಕಂಟಕನಾದ ಮಹಿಷಾಸುರನನ್ನು ಸಂಹಾರ ಮಾಡಿದಳು, ಅದರಿಂದ ಲೋಕ ಕಲ್ಯಾಣವಾಯಿತು.

ಮಹಿಷಾಸುರನ ಸಂಹಾರವಾದ ಮೇಲೆ ದುರ್ಗಾ ದೇವಿ ಸುಂದರವಾದೊಂದು ಗುಡ್ಡದ ಮೇಲೆ ವಿಶ್ರಾಂತಿ ಪಡೆದಳು. ಅದರಿಂದ ಆ ಗುಡ್ಡವು ಪವಿತ್ರವಾದುದೆಂದು ಭಾವಿಸಲ್ಪಟ್ಟಿತು.





ಮೈಸೂರು ನಗರಕ್ಕೆ ಹದಿಮೂರು ಕಿಲೋ ಮೀಟರ್ ದೂರದಲ್ಲಿ ಚಾಮುಂಡಿ ಪರ್ವತ ವೆಂದು ಹೆಸರು ಪಡೆದ ಈ ಗುಡ್ಡದ ಮೇಲೆಯೇ ಲೋಕಮಾತೆಯಾದ ದುರ್ಗಾದೇವಿ ಚಾಮುಂಡೇಶ್ವರಿಯ ಆಲಯವು ಬೆಳಗಿ ಕೊಂಡಿದೆ.

ಸಮುದ್ರಮಟ್ಟಕ್ಕೆ ೩,೪೮೯ ಅಡಿಗಳಷ್ಟು ಎತ್ತರ ವಾದ ಈ ದಿವ್ಯಕ್ಷೇತ್ರವನ್ನು ತಲಪಬೇಕಾದರೆ ಸಾವಿರ ಮೆಟ್ಟಿಲುಗಳನ್ನು ಹತ್ತಿ ನಡೆಯಬೇಕು. ಚಾಮುಂಡೀ ಪರ್ವತದ ಮೇಲೆಯೇ ಮಹಾ ಬಲೇಶ್ವರವೆಂಬ ಶಿವಾಲಯವೂ ಇದೆ.





ಗುಡ್ಡದ ಶಿಖರಕ್ಕೆ ಹೋಗುವ ದಾರಿಯಲ್ಲಿ ಬೃಹ್ಮಾಂಡವಾದೊಂದು ನಂದಿಯ ವಿಗ್ರಹವಿದೆ. ಒಂದೇ ಶಿಲೆಯಲ್ಲಿ ಕೆತ್ತಲ್ಪಟ್ಟ ಈ ನಂದಿ ವಿಗ್ರಹದ ಕೊರಳಿನ ಸುತ್ತಲೂ ಕೆತ್ತಲಾದ ಗಂಟೆಗಳು ಅಚ್ಚಲೋಹದ ಗಂಟೆಗಳಂತೆಯೇ ಕಂಡು ಆಶ್ಚರ್ಯಪಡಿಸುತ್ತದೆ.

ಆಲಯದೊಳಗಿನ ದೇವಿಯ ವಿಗ್ರಹವು, ಸ್ವರ್ಣಮಯ ಸಿಂಹಾಸನಾರೂಢಳಾಗಿ ದಿವ್ಯಾಕರ್ಷಣೆಯಿಂದ ಬೆಳಗುತ್ತಿದೆ. ಆಲಯದ ಪರಿಸರ ಪ್ರಾಂತಗಳು ಸುಂದರ ಪ್ರಕೃತಿ ದೃಶ್ಯಗಳಿಂದ ಕಣ್ಮನಗಳಿಗೆ ಹಬ್ಬವನ್ನುಂಟುಮಾಡುತ್ತವೆ.





ಆ ಗುಡ್ಡದ ಶಿಖರವನ್ನು ಸೇರಲು ಸದುಪಾಯಗಳೇನಿಲ್ಲದ ಪೂರ್ವಕಾಲದಲ್ಲಿ ಕೂಡಾ ಭಕ್ತರು ತಂಡೋಪತಂಡವಾಗಿ ಹೋಗಿಬರುತ್ತಿದ್ದರು. ಈಗ ಹೋಗಿಬರಲು ಸುಲಭವಾಗಿದೆ ಇಲ್ಲಿ ಪ್ರತಿ ವರ್ಷವೂ ನಡೆಯುವ ನವರಾತ್ರಿಯ ಉತ್ಸವಕ್ಕೆ ದೇಶದ ನಾಲ್ಕು ಮೂಲೆಗಳಿಂದಲೂ ಭಕ್ತರು ಅಸಂಖ್ಯಾಕರಾಗಿ ಬರುತ್ತಿರುವರು.



# ಪಂಚವ್ಯಾಘ್ರ ಶಿಕಾರ

ಕೆಲವು ನೂರು ವರ್ಷಗಳ ಹಿಂದೆ ಚೀನಾ ದೇಶದಲ್ಲಿ ನಿರ್ಗತಿಕನಾದೊಬ್ಬ ಯುವಕನಿದ್ದನು. ತಾಯಿಯೊಬ್ಬಳ ಹೊರತು ಬೇರೆ ಯಾವ ದಿಕ್ಕೂ ಅವನಿಗಿರಲಿಲ್ಲ. ಗುಡ್ಡಗಾಡುಗಳಿಗೆ ಹೋಗಿ ಕಟ್ಟಿಗೆ ಕಡಿದು ಒಡೆದು ಮಾರಿ ಜೀವನ ನಡೆಸುತ್ತಿದ್ದನು. ಶ್ರಮವು ಅವನಿಗೆ ಮೈ ಹಿಡಿದುಹೋಗಿತ್ತು.

ಚಳಿಗಾಲದ ಸಾಯಂಕಾಲದಲ್ಲಿ ಒಂದು ದಿನ ಅವನು ಗುಡ್ಡದ ಇಳಿಜಾರಿನಲ್ಲಿ ಕಟ್ಟಿಗೆಗಳನ್ನು ಕಡಿಯುತ್ತಿರುವಾಗ, ಸಮೀಪದಲ್ಲಿದ್ದ ಬಿದಿರು ಹಿಂಡಿನೊಳಗಿನಿಂದ ಸಂಕಟದಲ್ಲಿ ನರಳಿಕೊಂಡಿರುವಂತಹ ಮೂಲುಗು ಶಬ್ದ ಹೊರಡುವುದನ್ನು ಕೇಳಿದನು. ಬಿದಿರು ಹಿಂಡು ಒತ್ತೊತ್ತಾಗಿ ದಟ್ಟವಾಗಿದ್ದುದರಿಂದ ಒಳಗೆ ಏನಿರುವುದೋ ತಿಳಿಯಲಿಲ್ಲ.

ಯುವಕನು ಕೊಡಲಿಯನ್ನು ಹೆಗಲಲ್ಲಿಟ್ಟುಕೊಂಡು ಆ ಬಿದಿರು ಹಿಂಡಿನ ಹತ್ತಿರ ಹೋದನು. ನರಳುವ ಶಬ್ದ ಇನ್ನಷ್ಟು ಜೋರಾಗಿ ಕೇಳುತ್ತಿತ್ತು. ಒಳಗೆ ಯಾರಿಗೆ ಏನಾಗಿದೆ ಎಂಬುದೊಂದೂ ತಿಳಿಯಲಿಲ್ಲ. ಅವನು ಬಹು ಜಾಗರೂಕತೆಯಿಂದ ಎಡೆಮಾಡಿಕೊಂಡು ಬಿದಿರುಮೆಳೆಯ ಪೊದರಿನೊಳಗೆ ಪ್ರವೇಶಿಸಿದನು. ಅಷ್ಟು ಜಾಗ್ರತೆಗೆ ಕಾರಣವೇನೆಂದರೆ, ಅದು ಐದು ವರ್ಷಗಳ ಹಿಂದೆ ಕಡಿದ ಬಿದಿರಿನ ಮೆಳೆಯಾಗಿತ್ತು. ಕಡಿದ ಜಾಗಗಳಲ್ಲಿ ಬಿದಿರಿನ ಸಿಂಬೆಗಳು ಕತ್ತಿಗಿಂತ ಹರಿತವಾಗಿದ್ದುವು. ಅಪ್ಪಿತಪ್ಪಿ ಅವುಗಳ ಮೇಲೆ ಪಾದವಿಟ್ಟುಬಿಟ್ಟರೆ ಪಾದವನ್ನು ಸೀಳುವಂಥವು. ಅಲ್ಲದೆ ಒಳಗೆ ಸಿಕ್ಕಿಕೊಂಡಿರುವುದು ಮನುಷ್ಯನೋ ಮೃಗವೋ ಎಂಬುದೂ ಆ ಶಬ್ದದಿಂದ ಗೊತ್ತಾಗುತ್ತಿರಲಿಲ್ಲ. ನರಳಿಕೆ ಮಾತ್ರ ಬಹು ದೀನವಾಗಿತ್ತು.

ಕಟ್ಟಿಗೆಯ ಯುವಕನಿಗೆ ಪೊದೆಯೊಳಗೊಂದು ಹೆಣ್ಣು ಹುಲಿ ಸಿಕ್ಕಿಕೊಂಡಿರುವುದು ಕಂಡಿತು. ಅದರ ಪಾದದೊಳಗೆ ಬಿದಿರಿನ ಶೂಲದಂತಹ ಸಿಂಬೆಯೊಂದು ಆಳಕ್ಕೆ ಇಳಿದಿತ್ತು. ಕಾಲು ಕದಲಿಸಲಾಗದೆ ಸಂಕಟದಿಂದ ಮೂಲುಗಿಕೊಂಡಿತ್ತು. ಮೊದಲು ಹುಲಿಯನ್ನು ನೋಡಿ ಯುವಕನಿಗೆ ಭಯವಾದರೂ ತನ್ನನ್ನೇ ನೋಡುವ ಅದರ ದೀನ ದೃಷ್ಟಿ ಅವನ ಎದೆಯನ್ನು ಕರಗಿಸಿತು.

ಕಟ್ಟಿಗೆ ಯುವಕನು ತಟಕ್ಕನೆ ಬಿದಿರು ಮೆಳೆಯೊಳಗಿನಿಂದ ಈಚೆಗೆ ಬಂದು, ಗುಡ್ಡವಿಳಿದು

ಚೀನಾ ಜಾನಪದ ಕಥೆ



ಮನೆಗೆ ಓಡುತ್ತಾ ಹೋಗಿ, "ಅಮ್ಮಾ, ಗುಡ್ಡದಲ್ಲಿ ಒಂದು ಹುಲಿ ಪಾಪ, ದೊಡ್ಡ ಗಾಯದಿಂದ ನರಳಿ ಕೊಂಡಿದೆ. ಅದನ್ನು ಕಾಪಾಡಿಬಿಡೋಣವೆಂತಲೇ ನಿನ್ನನ್ನು ಕರೆಯಲು ಓಡಿಬಂದೆ. ನನ್ನೊಂದಿಗೆ ಸಹಾಯಕ್ಕೆ ನೀನೂ ಸ್ವಲ್ಪ ಬರುತ್ತೀಯಾ ಅಮ್ಮಾ ?" ಎಂದನು.

"ಹಾಗೇನು ? ಒಂದು ಕ್ಷಣ ತಾಳು. ಗಾಯಕ್ಕೆ ಹಚ್ಚಲು ಮದ್ದು ಕೂಡಾ ಇಟ್ಟುಕೊಳ್ಳೋಣ" ಎಂದಳು ತಾಯಿ.

ಆಮೇಲೆ ತಾಯಿ ಮಗ ಇಬ್ಬರೂ ಹುಲಿ ಇರುವ ಸ್ಥಳಕ್ಕೆ ಬಂದರು. ತಾಯಿಯೂ ಮಗನೂ ಮಗು ವನ್ನು ಮಂಗಾಡಿಸುವಂತೆ ಸಮಾಧಾನದ ಮಾತು ಹೇಳುತ್ತಿರಲು, ಮಗನು ಉಪಾಯದಿಂದ ಹುಲಿಯ ಕಾಲನ್ನು ಬಿದಿರು ಕೋಲಿನಿಂದ ಮೇಲಕ್ಕೆ ಎತ್ತಿ ಬಿಟ್ಟನು. ವಿಮೋಚನೆ ಸಿಕ್ಕಿದ ಮೇಲೆ ಆ ಹುಲಿ ತನ್ನ ಸಹಜ ಕ್ರೌರ್ಯವನ್ನು ತೋರಿಸಲಿಲ್ಲ. ಆ ತಾಯಿ ಮಗಂದಿರನ್ನು ಬಹಳ ಕೃತಜ್ಞತೆಯಿಂದ ನೋಡುತ್ತಾ ಮೂಸಿತು. ತಾಯಿ ಹುಲಿಯ ಗಾಯಕ್ಕೆ ಮದ್ದು ಹಚ್ಚಿ, ಥಕ್ಕನೆ ಎರಡು ಅಡಿಗಳನ್ನು ಹಿಂದಕ್ಕಿಟ್ಟಳು.

ಆಮೇಲೆ ಮರ್ಯಾದೆಯಿಂದ ತಮ್ಮ ಪಾಡಿಗೆ ಹೋಗಲು ಏನೋ ಹೇಳುವ ವಾಡಿಕೆಯಂತೆ, "ಹುಲಿಯಮ್ಮಾ, ನಾವು ತುಂಬಾ ಬಡವರು. ನನ್ನ ಈ ಮಗನಿಗೆ ಯಾರೂ ಹುಡುಗಿ ಕೊಡಲು ಮುಂದೆ ಬರುವುದಿಲ್ಲ. ನಿನ್ನ ಪುಣ್ಯದಿಂದ ನಿನ್ನ ಗುರುತಿನ ಹುಡುಗಿಯರಿದ್ದರೆ ನಮ್ಮವನನ್ನು ಒಂದು ಕುಟುಂಬಸ್ಥ ನಾಗುವಂತೆ ಮಾಡು ಹುಲಿಯಮ್ಮಾ. ನಿನಗೂ ಪುಣ್ಯ ಬರುತ್ತೆ" ಎಂದು ಹೇಳಿ ಮಗನೊಂದಿಗೆ ಬೇಗ ಬೇಗನೆ ಹಿಂದಿರುಗಿದಳು.

ಅನಂತರ ಚಳಿಗಾಲವು ಮುಗಿಯುವ ಮೊದಲೇ ಒಬ್ಬ ಧನಿಕನ ಕುಮಾರಿಯನ್ನು ಮದುಮಗಳಾಗಿ ಮಾಡಿ ಕಾಣಿಕೆಯ ವಸ್ತು ಒಡವೆಗಳೊಂದಿಗೆ ವರನ ಮನೆಗೆ ಹೋಗುವ ಗುಂಪೊಂದು, ಆ ಗುಡ್ಡದ ದಾರಿಯಲ್ಲಿ ಬಂದಿತು. ಮದುಮಗಳು ಮೇನೆಯಲ್ಲಿ ಕುಳಿತಿದ್ದಳು. ಮೇನೆ ಹೊತ್ತು ನಡೆಯುವವರು ಮಾತ್ರವಲ್ಲದೆ, ಮುಂದೆಯೂ ಹಿಂದೆಯೂ ಕೆಲವು ಮಂದಿ ಸೇವಕರು ಗಂಟು ಪೆಟ್ಟಿಗೆಗಳನ್ನು ಹೊತ್ತು ಕೊಂಡು ನಡೆಯುತ್ತಿದ್ದರು.

ಆಕಸ್ಮಾತ್ತಾಗಿ ಆ ಮದುವೇ ಗುಂಪು ಸಾಗುವ ದಾರಿಯಲ್ಲಿ ಅಡ್ಡಗಟ್ಟಿ ಐದು ಹೆಬ್ಬುಲಿಗಳು ಕುಳಿತು ಕೊಂಡು, ಕೋರೆ ಹಲ್ಲುಗಳನ್ನೂ, ಪಂಜಾಗಳನ್ನೂ, ತೋರಿಸುತ್ತ, ಗುರುಗುಟ್ಟಿಕೊಂಡಿದ್ದುವು. ಅವುಗಳ ಬಾಲಗಳು ಆಚೆಗೂ ಈಚೆಗೂ ಮೇಲೂ ಕೆಳಗೂ ನಲಿದಾಡುತ್ತಿದ್ದುವು.

ಅವುಗಳನ್ನು ನೋಡಿದವರೆಲ್ಲಾ ಹೊರೆಗಳನ್ನು ಕೆಳಗೆ ಹಾಕಿ, ಕಾಲಿಗೆ ಬಲವಿದ್ದಷ್ಟು ವೇಗವಾಗಿ, ಓಡಿಹೋದರು. ಮೇನೆ ಹೊತ್ತವರೂ ಅಷ್ಟೇ !

ಮದುಮಗಳು ಗಾಬರಿಯಾಗಿ ಮೇನೆಯ ಬಾಗಿಲು ತೆರೆದು ಹೊರಗೆ ಬಂದು ನಿಂತಳು. ಅಲ್ಲಿ ತನ್ನವರಾರೂ ಕಾಣದೆ ತಾನೂ, ಐದು ಹುಲಿಗಳೂ ಇರುವುದನ್ನು ಅವಳು ನೋಡಿದಳು. ಅವಳ ಸುತ್ತಲೂ ಆ ಹುಲಿಗಳು !

ಅನಂತರ ಸ್ವಲ್ಪ ಹೊತ್ತಿನ ಮೇಲೆ ಕಟ್ಟಿಗೆ ಯುವಕನ ಮನೆಯ ಬಾಗಿಲನ್ನು ಯಾರೋ ತಟ್ಟಿದ ಶಬ್ದ ಕೇಳಿತು. ಯುವಕನು ಬಾಗಿಲು ತೆರೆದು ನೋಡಿದನು. ಸುಂದರಿಯಾದ ಮದುಮಗಳು ಬಾಗಿಲ ಹೊರಗೆ ನಿಂತಿದ್ದಳು. ಅವಳ ಹಿಂದೆ ಐದು ಹುಲಿಗಳೂ ಇದ್ದುವು. ಅವುಗಳು ತನ್ನನ್ನು ನೋಡಿ ಮಂದಹಾಸದಲ್ಲಿ ಓಲಾಡುವಂತೆ ಕಟ್ಟಿಗೆ ಯುವಕನಿಗೆ ಕಂಡಿತು. ಧೈರ್ಯವೂ ಬಂತು.

ಮುಂದೆ ಆ ಯುವಕನು ಮದುಮಗಳ ಸಮ್ಮತಿ ಕೇಳಿ ಅವಳನ್ನು ಮದುವೆ ಮಾಡಿಕೊಂಡನು. ಅವಳು ತನ್ನ ಗಂಡನ ಮೇಲೂ, ಅತ್ತೆಯ ಮೇಲೂ ಬಹಳ ಪ್ರೇಮಾಭಿಮಾನದಿಂದಿದ್ದಳು. ಅವರ ಜೀವಿತವು ಸುಖವಾಗಿ ನಡೆಯುತ್ತಿತ್ತು. ಮದುಮಗಳೊಂದಿಗೆ ಬೇಕಾದಷ್ಟು ಬಳುವಳಿಯೂ ಸಿಕ್ಕಿವೆಯಷ್ಟೆ ?

ಕೆಲವು ದಿನಗಳ ಮೇಲೆ ಮದುಮಗಳ ತಂದೆಗೆ ನಡೆದ ಸಂಗತಿ ಗೊತ್ತಾಯಿತು. ಅವನು ಗುಡ್ಡದ ಆಚೆಯ ಬದಿಯ ಊರಿನಲ್ಲಿದ್ದನು. ಅವನು ಬಹು ದೊಡ್ಡ ಧನಿಕನಾಗಿ, ಎಲ್ಲರ ಮೇಲೆ ಪ್ರಭಾವವುಳ್ಳವನು. ಅವನು ಬಹಳ ಕೋಪಗೊಂಡು, ಕಟ್ಟಿಗೆ ಯುವಕನೂ ಅವನ ತಾಯಿಯೂ ಕೂಡಿ, ತನ್ನ ಮಗಳನ್ನು ಅಪಹರಿಸಿದರೆಂದು ನ್ಯಾಯಾಧಿಕಾರಿಯ ಮುಂದೆ ಫಿರ್ಯಾದಿ ಮಾಡಿದನು. ನ್ಯಾಯಾಧಿಕಾರಿ ಕಟ್ಟಿಗೆಯ ಯುವಕನನ್ನೂ ಅವನ ತಾಯಿಯನ್ನೂ ನ್ಯಾಯಾಸ್ಥಾನಕ್ಕೆ ಕರೆಯಿಸಿ ವಿಚಾರಣೆ ನಡೆಸಿದನು.

ತಾನು ಮದುವೆಯಾದ ಹುಡುಗಿಯನ್ನು ತಾನು ಅಪಹರಿಸಲಿಲ್ಲವೆಂದೂ, ಹುಲಿಗಳು ಅವಳನ್ನು ಕರೆದುಕೊಂಡು ತನ್ನ ಮನೆಯ ಮುಂದೆ ಬಿಟ್ಟುವೆಂದೂ ಕಟ್ಟಿಗೆಯ ಯುವಕನು ಹೇಳಿದನು. ನ್ಯಾಯಾಧಿಕಾರಿ ಆ ಮಾತನ್ನು ನಂಬದೆ, "ಇವನು



ತಪ್ಪು ಒಪ್ಪಿಕೊಳ್ಳುವವರೆಗೂ ಕೋಲಿನಿಂದ ಹೊಡೆಯಿರಿ" ಎಂದು ತನ್ನ ಭಟರಿಗೆ ಆಜ್ಞೆ ಮಾಡಿದನು.

ಆಗ ಕಟ್ಟಿಗೆಯವನ ತಾಯಿ ನ್ಯಾಯಾಧಿಕಾರಿಯ ಕಾಲಿಗೆ ಬಿದ್ದು, "ನನ್ನ ಮಗ ನಿಜವನ್ನೇ ಹೇಳುತ್ತಿದ್ದಾನೆ. ಬೇಕಾದರೆ ನಾನು ಹೋಗಿ ಹುಲಿಗಳನ್ನು ಸಾಕ್ಷಿಗೆ ಬರುವಂತೆ ಕರೆಯುತ್ತೇನೆ" ಎಂದಳು.

ಅದರಂತೆ ಅವಳು ಓಡುತ್ತಾ ಹೋಗಿ, ಸ್ವಲ್ಪ ಹೊತ್ತಿಗೆ ತಿರುಗಿ ಬಂದಳು. ಅವಳ ಹಿಂದೆಯೇ ಬರುವ ಹೆಬ್ಬುಲಿಗಳನ್ನು ನೋಡಿ ನ್ಯಾಯಾಸ್ಥಾನದಲ್ಲಿದ್ದವರೆಲ್ಲಾ ಕಾಲಿಗೆ ಬುದ್ಧಿ ಹೇಳಿದರು. ನ್ಯಾಯಾಧಿಕಾರಿ ಮಾತ್ರ ಎತ್ತರವಾದ ಮೇಜಿಯ ಮೇಲೆ ಹತ್ತಿನಿಂತು ನಡುಗುತ್ತ, ಹುಲಿಗಳನ್ನು ನೋಡಿ, "ನೀವೇನಾ...? " ಎಂದನು. ಆಮೇಲೆ ಅವನ ಬಾಯಿಂದ ಮಾತೇ ಬರಲಿಲ್ಲ.

ನ್ಯಾಯಾಧಿಕಾರಿ ಕೇಳಬೇಕಾದ ಪ್ರಶ್ನೆ ಅರ್ಥವಾದಂತೆ ಐದು ಹುಲಿಗಳೂ ತಲೆಗಳನ್ನು ಮೇಲಕ್ಕೂ ಕೆಳಕ್ಕೂ ಆಡಿಸಿದುವು. ವಿಚಾರಣೆ ಮುಗಿಯಿತು. ಕಟ್ಟಿಗೆಯ ಯುವಕನು ತನ್ನ ತಾಯಿಯೊಂದಿಗೆ ಮನೆಗೆ ಹಿಂದಿರುಗಿದನು.

ಆ ವರ್ಷದ ಬೇಸಗೆಯಲ್ಲಿ ಅನೇಕ ಸಾವಿರ ಮಂದಿ ಆಟವಿಕರು ರಾಜ್ಯದ ಮೇಲೆ ದಂಡೆತ್ತಿ ಬಂದರು. ಅವರ ಹಿಂದೆ ಬೇಟೆ ನಾಯಿಗಳೂ, ವಾನರಗಳೂ, ಭಲ್ಲೂಕಗಳೂ ಇದ್ದುವು. ಚಕ್ರವರ್ತಿಗೆ ಏನು ಮಾಡಬೇಕು, ಹೇಗೆ ಪ್ರತಿಭಟಿಸಬೇಕೆಂದು ಗೊತ್ತಾಗಲಿಲ್ಲ.

ಸೈನಿಕರೇನೋ ಆ ವಿಕಟ ಗುಂಪಿನ ಮೇಲೆ ಯುದ್ಧಕ್ಕೆ ಹೋದರು. ಆದರೆ ಯುದ್ಧವಿದ್ಯೆಗಳೇನೂ ತಿಳಿಯದ ಆಟವಿಕರ ಮೇಲೆ ಅವರ ಯುದ್ಧ ನೈಪುಣ್ಯಗಳೊಂದೂ ಪ್ರಯೋಜನಕ್ಕೆ ಬರಲಿಲ್ಲ.

ಚಕ್ರವರ್ತಿ ತಲೆ ಕೆರೆದುಕೊಂಡಿರುವಾಗ ಯಾರೋ ಕಟ್ಟಿಗೆಯವನ ಸಮಾಚಾರ ಹೇಳಿದರು. ಅವನಿಗೆ ಹುಲಿಗಳ ಸಹಾಯವಿರುವುದನ್ನು ತಿಳಿದು ಚಕ್ರವರ್ತಿ ಅವನನ್ನು ಕರೆಯಿಸಿ, "ನೀನು ಶತ್ರುಗಳನ್ನು ಹೊಡೆದೋಡಿಸಿಬಿಟ್ಟರೆ ನಿನ್ನನ್ನು ಸರ್ವ ಸೇನಾಧಿಪತಿಯಾಗಿ ಮಾಡುತ್ತೇನೆ" ಎಂದನು.

ಯೋಧರನ್ನೂ ಆಯುಧಗಳನ್ನೂ ಕವಚಗಳನ್ನೂ ನೋಡಿ ಹೆದರದಿದ್ದ ಆಟವಿಕ ಪುಂಡರು ಐದು ಹೆಬ್ಬುಲಿಗಳನ್ನು ನೋಡಿದ ಕೂಡಲೇ ಕುಯ್ಯೋ ಮುರ್ಯೋ ಕೂಗುತ್ತಾ, ಹಾರಿಬಿದ್ದೆದ್ದು ಚೆಲ್ಲಾಚೆದರಾಗಿ ಓಡಿಯೋಡಿ ಹೋದರು. ಚಕ್ರವರ್ತಿಯ ಮರ್ಯಾದೆ ಉಳಿಯಿತು. ಅವನು ಕಟ್ಟಿಗೆಯ ಯುವಕನಿಗೆ ಶಾಸ್ತ್ರೋಕ್ತವಾಗಿ ಸರ್ವಸೇನಾನಿಯ ಪದವಿಯನ್ನು ಕೊಟ್ಟು "ಪಂಚವ್ಯಾಘ್ರ ಶೂರ" ಎಂಬ ಬಿರುದನ್ನಿತ್ತು, ದೊಡ್ಡ ಮೊತ್ತದ ಸಂಬಳವನ್ನೂ ನಿರ್ಣಯಿಸಿ ಆಸ್ಥಾನದಲ್ಲಿರಿಸಿಕೊಂಡನು.






**ಕು**ಬೇರನು ತನ್ನ ಜತೆಯಲ್ಲಿ ಶುಕ್ರ ಮತ್ತು ಪ್ರೋಷ್ಟಪದರೆಂಬ ಇಬ್ಬರು ಮುಖ್ಯಮಂತ್ರಿಗಳನ್ನು ಕರೆದುಕೊಂಡು ರಾವಣನ ಬಳಿಗೆ ಬಂದು, " ಎಲೋ ದುಷ್ಟನೇ ! ದುರ್ವಿದಗ್ಧನೇ ! ನಾನು ಎಷ್ಟು ಹೇಳಿದರೂ ನಿನ್ನ ಕಿವಿಗೆ ಏರಲಿಲ್ಲ. ಅಜ್ಞಾನದಿಂದ ತಿಳಿಯದೆ ವಿಷವನ್ನು ಕುಡಿದವನಿಗೆ ಅದರ ದುಷ್ಫಲಿತ ಅನುಭವಕ್ಕೆ ಬಂದಾಗ ಮಾತ್ರವೇ ಜ್ಞಾನ ಬರುತ್ತದೆ. ಅದು ನಿಷ್ಪ್ರಯೋಜಕವಾದ ಜ್ಞಾನ. ನಿನ್ನ ಅಜ್ಞಾನವು ನಿನಗೆ ತಿಳಿಯುವುದಿಲ್ಲ. ನಿನಗೆ ಅಧೋಗತಿ ಬರಬಾರದೆಂತಲೇ ಇಷ್ಟೆಲ್ಲಾ ಹೇಳುತ್ತಿದ್ದೇನೆ. ಆದರೂ ನಿನಗೆ ಗೊತ್ತಾಗುವುದಿಲ್ಲ. ನೀನು ಇಷ್ಟೆಲ್ಲಾ ಕಲಿತು ಸಾಧಿಸಿ ಏನು ಪ್ರಯೋಜನ ? ನರಕಬಾಧೆಯನ್ನು ಅನುಭವಿಸುವಾಗ ತಿಳಿದುಕೊಳ್ಳುವಿ. ನಿನ್ನೊಡನೆ ಮಾತಾಡುವುದು ವೃಥಾ ಸಮಯ ಹಾಳು " ಎಂದು ನಿಂದಿಸಿದನು.

ಆದರಿಂದ ರಾವಣನು ಇನ್ನಷ್ಟು ಕೆರಳಿ ಕೆಂಡವಾದನು. ಅಣ್ಣನೆಂದು ನೋಡದೆ ಮುಷ್ಟಿಬಿಗಿದು ನಿಂತನು. ಅಣ್ಣತಮ್ಮಂದಿರೊಳಗೆ ದ್ವಂದ್ವ ಯುದ್ಧವು ನಡೆಯಿತು. ಕುಬೇರನು ಪ್ರಯೋಗಿಸಿದ ಅಸ್ತ್ರಗಳೆಲ್ಲವನ್ನೂ ರಾವಣನು ಪ್ರತ್ಯಸ್ತ್ರಗಳಿಂದ ಪರಿಹರಿಸಿ, ಮಾಯಾ ಯುದ್ಧಕ್ಕೆ ತೊಡಗಿದನು. ಕುಬೇರನಿಗೆ ಅನೇಕ ಬಗೆಯ ರೂಪಗಳು ಕಾಣಬಂದುವು. ಎಲ್ಲಿಯೂ ರಾವಣನ ರೂಪ ಮಾತ್ರ ಕಾಣಲೇ ಇಲ್ಲ. ಆ ಸಮಯದಲ್ಲಿ ರಾವಣನು ಅಧರ್ಮ ರೀತಿಯಲ್ಲಿ ಕುಬೇರನ ತಲೆಯ ಮೇಲೆ ಗದೆಯಿಂದ ಹೊಡೆದು ನೆಲಕ್ಕೆ ಬೀಳಿಸಿಬಿಟ್ಟನು. ರಕ್ತ ಸುರಿಸುತ್ತಾ ಬಿದ್ದ ಕುಬೇರನನ್ನು ನಿಧಿಗಳ ಅಧಿದೇವತೆಗಳು ನಂದನವನಕ್ಕೆ ಎತ್ತಿಕೊಂಡು ಹೋಗಿ ಚಿಕಿತ್ಸೆ ಮಾಡಿದರು.

ಹೀಗೆ ರಾವಣನು ಕುಬೇರನ ಮೇಲೆ ವಿಜಯವನ್ನು ಸಾಧಿಸಿ, ಪುಷ್ಪಕ ವಿಮಾನವನ್ನು ತೆಗೆದುಕೊಂಡು, ಅದರಲ್ಲಿ ಏರಿ ಕುಳಿತು ಹಾರಿಸುತ್ತಾ ಶರವಣಕ್ಕೆ ಹೋದನು. ಹೀಗೆ ಪುಷ್ಪಕವನ್ನು ತಾನು ಗೆದ್ದುಕೊಂಡೆನೆಂದು ನಂಬಿ ಹೆಚ್ಚಳಿಸಿಕೊಂಡನು.

## ೪. ವೇದವತಿಯ ಪ್ರತಿಜ್ಞೆ



ಗರ್ವಿಷ್ಠನೊಂದಿಗೆ ವಿವಾದ ಬೇಡವೆಂದು ಕುಬೇರನೂ ಸುಮ್ಮನಾದನು.

ರಾವಣನು ಪುಷ್ಪಕ ವಿಮಾನದಲ್ಲಿ ಸಂತೋಷದಿಂದ ಸಾಗುತ್ತಿರಲು, ಶರವಣ ಪರ್ವತವು ಬಂಗಾರದ ರಂಗಿನಿಂದ ಹೊಳೆಯುತ್ತ ಎರಡನೇ ಸೂರ್ಯನ ಹಾಗೆ ಕಾಣುತ್ತಿತ್ತು. ರಾವಣನು ಅದರ ಮೇಲ್ಭಾಗದಲ್ಲಿ ಬರುವಾಗ ಪುಷ್ಪಕ ವಿಮಾನವು ಮುಂದೆ ಸಾಗದೆ ಗಕ್ಕನೆ ನಿಂತುಬಿಟ್ಟಿತು.

ಅದನ್ನು ನೋಡಿ ರಾವಣನು "ಇಚ್ಛೆಸಿದ ಪ್ರಕಾರ ನಡೆಯುವ ಈ ವಿಮಾನವು ಹೀಗೆ ನಿಂತು ಹೋಯಿತೇಕೆ ? ಇದೇನಾದರೂ ಕುಬೇರನ ಪಕ್ಷಪಾತಿಯಾಗಿದ್ದೀತೆ ? " ಎಂದು ತನ್ನೊಂದಿಗಿದ್ದ ಮಂತ್ರಿಗಳನ್ನು ಕೇಳಿದನು.

ಅಷ್ಟರಲ್ಲಿ ಈಶ್ವರನ ಪಾರ್ಶ್ವಧರನೂ, ಮಹಾಬಲಿಷ್ಠನೂ ಆದ ನಂದಿ ರಾವಣನನ್ನು ಉದ್ದೇಶಿಸಿ ಗಂಭೀರ ಕಂಠದಿಂದ, "ಎಲೋ ದಶಗ್ರೀವಾ! ನಿಲ್ಲಲ್ಲೇ ! ಆಚೆಗೆ ಹೋಗು. ಕೂಡಲೇ ಹಿಂದೆ ಹೋಗಿಬಿಡು. ಈ ಪರ್ವತದ ಮೇಲೆ ಶಿವನು ಲೀಲಾಮಗ್ನನಾಗಿದ್ದಾನೆ. ಸುವರ್ಣರೂ, ನಾಗರೂ, ಯಕ್ಷರೂ, ದೈತ್ಯರೂ, ದಾನವರೂ, ರಾಕ್ಷಸರೂ ಯಾವ ಇತರ ಪ್ರಾಣಿಗಳೂ ಈ ಪರ್ವತದ ಮೇಲೆ ಬರಬಾರದು. ಜಾಗ್ರತೆ ! ದೂರ ಸುತ್ತಿಕೊಂಡು ಹೋಗು" ಎಂದನು.

ಆ ಮಾತುಗಳನ್ನು ಕೇಳಿದ ಕೂಡಲೇ ರಾವಣನು ಕೋಪಾವೇಶದಿಂದ ಕಂಪಿತನಾಗಿ, "ಯಾರವನು ಮರ್ಯಾದೆ ತಿಳಿಯದ ಶಿವ ? " ಎಂದು ಮೊದಲಿಸಿಕೊಳ್ಳುತ್ತ ವಿಮಾನದಿಂದ ಇಳಿದು ಗುಡ್ಡದ ಕೆಳಗೆ ಹೋದನು.

ಅಲ್ಲಿ ಅವನಿಗೆ ಶಿವನೂ, ತುಸು ದೂರದಲ್ಲಿ ಶೂಲ ಹಿಡಿದುಕೊಂಡು ಎರಡನೇ ಶಿವನ ಹಾಗೆ ನಿಂತುಕೊಂಡಿದ್ದ ನಂದೀಶ್ವರನೂ ಕಾಣಿಸಿದರು. ನಂದೀಶ್ವರನ ಕೊಂಬುಗಳ ಮುಖವನ್ನು ನೋಡಿ, "ನೀನೋ ಕೋತೀ ಹಾಗೆ ಎಚ್ಚರಿಸಿದ ಬಂಟ ? " ಎಂದು ರಾವಣನು ಮೇಘ ಗರ್ಜನೆಯಂತೆ ಗಡಗಡನೆ ನೆಗಾಡಿದನು.

ಅಪರಶಂಕರನಂತಹ ನಂದಿ ರಾವಣನ ನೆಗುವಿನಿಂದ ಕೋಪಗೊಂಡು, "ಎಲೋ ಗರ್ವಿಷ್ಠನೇ ! ನನ್ನ ಮುಖವನ್ನು ನೋಡಿ ಕೋತಿಯೆಂದು ನಗುವ ನಿನ್ನನ್ನೂ ನಿನ್ನ ಕುಲವನ್ನೂ ನನಗೆ ಸಮಾನರಾದ ಶಕ್ತಿಯುಳ್ಳ ವಾನರರು ಕಾಲ ಬಂದಾಗ ತಪ್ಪದೆ ನಿರ್ಮೂಲ ಮಾಡುತ್ತಾರೆಂದು ತಿಳಿ ! " ಎಂದು ಶಪಿಸಿದನು.

ರಾವಣನು ನಿರ್ಲಕ್ಷ್ಯವಾಗಿ ಪರ್ವತವನ್ನು ಸಮೀಪಿಸಿ ನಂದಿಯನ್ನು ನೋಡಿ "ನನ್ನ ವಿಮಾನವನ್ನು ತಡೆದ ಈ ಪರ್ವತವನ್ನೇ ಈಗ ಕಿತ್ತುಹಾಕುತ್ತೇನೆ. ನಾನು ಎಂಥವನೆಂದು ಇಲ್ಲಿನವರಿಗೆ ತಿಳಿಯದೆಂದು ತೋರುತ್ತದೆ ! ಪಾಪ ! ಈಗ ಎಲ್ಲರೂ



ತಿಳಿಯಲಿ!" ಎಂದು ತನ್ನ ಕೈಗಳನ್ನು ಪರ್ವತದ ಕೆಳಗೆ ತೂರಿಸಿ ಪರ್ವತವನ್ನು ಎತ್ತಲು ನೋಡಿದನು. ಪರ್ವತವು ಕದಲಿತು.

ಇದನ್ನೆಲ್ಲ ಗಮನಿಸಿಕೊಂಡಿದ್ದ ಶಿವನು ನಸುಗೋಪ ದಿಂದ ಮುಗುಳು ನಗುತ್ತ ತನ್ನ ಕಾಲಿನ ಉಂಗುಷ್ಠ ದಿಂದ ಪರ್ವತವನ್ನು ಒತ್ತಿದನು.

ಆದರಿಂದ ರಾವಣನ ಕೈಗಳು ಪರ್ವತದ ಅಡಿ ಯಲ್ಲಿ ಸಿಕ್ಕಿಕೊಂಡು ಜಜ್ಜಿದುವು. ಆ ನೋವಿನಿಂದ ರಾವಣನು ಮಹಾ ದಾರುಣವಾಗಿ ಆಕ್ರೋಶ ಮಾಡಿದನು. ರಾವಣನ ಮಂತ್ರಿಗಳು ತಮ್ಮೊಳಗೇ ಪೇಚಾಡುತ್ತ, ರಾವಣನೊಂದಿಗೆ, "ಪ್ರಭೂ! ಶಂಕರನನ್ನು ತೃಪ್ತಿಪಡಿಸು. ಈಗ ಆತನ ಹೊರತು ಬೇರೆ ಗತಿ ಇಲ್ಲ. ಅವನಿಗೇ ಶರಣಾಗತನಾಗು ಪ್ರಭೂ. ಅವನನ್ನು ಧ್ಯಾನಿಸು. ಸ್ತೋತ್ರ ಮಾಡಿ ಮೆಚ್ಚಿಸು ಪ್ರಭೂ" ಎಂದು ಸಲಹೆ ಮಾಡಿದರು.

ರಾವಣನು ನೋವಿನಿಂದ ಅಳುತ್ತಾ ಶಿವನನ್ನು ಸ್ತೋತ್ರ ಮಾಡಿದನು. ಅದನ್ನು ಕೇಳುತ್ತಾ ಶಿವನ ಕೋಪವು ತಣಿಯಿತು. ಕಡೆಗೆ ಶಿವನು ಕನಿಕರ ಪಟ್ಟು ರಾವಣನ ಕೈಗಳನ್ನು ಪರ್ವತದ ಅಡಿಯಿಂದ ಎಳೆದುಕೊಳ್ಳುವಂತೆ ಮಾಡಿ, "ರಾವಣಾ, ನಿನ್ನ ವೀರತ್ವವೂ ಮದವೂ ಸ್ತೋತ್ರವೂ ಒಂದಕ್ಕೊಂದು ತೂಕ ಸರಿಯಾಗಿವೆ. ಮೆಚ್ಚಿದೆನು. ಸಂತೋಷ ವಾಯಿತು. ನಿನ್ನ ಕೈಗಳು ಜಜ್ಜಿದಾಗ ನೀನು ಮಾಡಿದ ದಾರುಣವಾದ ಶಬ್ದದಿಂದ ನಿನ್ನ ರಾವಣ ನಾಮವು ಸಾರ್ಥಕವಾಗುವಂತಾಯಿತು. ಈ ಹೆಸರೇ ಸ್ಥಿರವಾಗಿ ಚಿರಕಾಲ ನಿಲ್ಲುವಂತೆ ಮಾಡಿ ಕೊಂಡಿ. ಇನ್ನು ನೀನು ನಿನ್ನ ಇಷ್ಟ ಬಂದ ಕಡೆಗೆ ಹೋಗು" ಎಂದನು.

ಆಗ ರಾವಣನು, "ಮಹಾದೇವಾ! ನಿನಗೆ ನನ್ನ ಮೇಲೆ ತೃಪ್ತಿಯುಂಟಾದ ಪಕ್ಷದಲ್ಲಿ ನಾನು ಕೇಳುವು ದನ್ನು ಅನುಗ್ರಹಿಸು. ನಾನು ಇದುವರೆಗೆ ದೇವತೆ ಗಳೇ ಮೊದಲಾದವರಿಂದ ಮರಣ ಬಾರದಂತೆ ವರ ಪಡೆದಿದ್ದೇನೆ. ಅಲ್ಪರಾದ ಮಾನವರನ್ನು ನಾನು ಲಕ್ಷಿಸುವುದಿಲ್ಲ. ಬ್ರಹ್ಮದೇವನು ನನಗೆ ದೀರ್ಘಾ ಯುಷ್ಯ ಕೂಡಾ ಕೊಟ್ಟಿದ್ದಾನೆ. ನಾನು ನಿನ್ನಿಂದ ಇನ್ನಿಷ್ಟು ಹೆಚ್ಚು ಆಯುಷ್ಯವನ್ನೂ, ಒಂದು ಆಯುಧ ವನ್ನೂ ಬೇಡುತ್ತೇನೆ. ನಿನ್ನ ಅನುಗ್ರಹದ ನೆನಪಿ ಗಾಗಿ ದಯಮಾಡಿ ಅವುಗಳನ್ನು ಅನುಗ್ರಹಿಸು ಮಹಾದೇವಾ!" ಎಂದು ಎಲ್ಲಾ ಕೈಗಳನ್ನೂ ಮುಗಿದು ಕೇಳಿಕೊಂಡನು.

ಶಿವನು ರಾವಣನಿಗೆ ಆಯುಶ್ಶೇಷವನ್ನೂ, ಚಂದ್ರ ಹಾಸವೆಂಬ ಖಡ್ಗವನ್ನೂ ಕೊಡುತ್ತ, "ಈ ಖಡ್ಗ ವನ್ನು ಎಂದಿಗೂ ಅವಮಾನಿಸಕೂಡದು. ಯಾವ ದಿನ ಇದಕ್ಕೆ ಅವಮಾನವಾಗುವುದೋ ಆಗಲೇ ಇದು ನಿನ್ನನ್ನು ಬಿಟ್ಟು ತಿರುಗಿ ನನ್ನ ಬಳಿಗೆ ಬಂದುಬಿಡುತ್ತದೆ. ನೆನಪಿಟ್ಟುಕೋ!" ಎಂದು ಹೇಳಿದನು.



ಈ ಬಗೆಯಾಗಿ ಶಿವನಿಂದ ವರಗಳನ್ನು ಪಡೆದ ರಾವಣನು ತನ್ನ ಪುಷ್ಪಕ ವಿಮಾನದಲ್ಲಿ ಏರಿಕೊಂಡು ಭೂಮಿಯಲ್ಲೆಲ್ಲಾ ಸಂಚರಿಸುತ್ತ, ವೀರರಾದ ರಾಜರನ್ನೆಲ್ಲಾ ಹೆದರಿಸಿ ಕ್ಷೋಭೆಗೊಳಿಸುತ್ತಾ ಹೋದನು. ಪರಾಕ್ರಮಸಂಪನ್ನರಾದ ಕೆಲವರು ಧೈರ್ಯದಿಂದ ಅವನೊಡನೆ ಯುದ್ಧವನ್ನು ಮಾಡಿ ನಾಶವಾದರು. ಬುದ್ಧಿವಂತರಾದವರು ಅವನನ್ನು ಗೆಲ್ಲಲಾರೆವೆಂದು ತಿಳಿದು ಕಾಲವನ್ನು ನಂಬಿಕೊಂಡು, ಸೋಲನ್ನು ಒಪ್ಪಿ, ಅವನು ಹೇಳಿದ ಹಾಗೆ ಕೇಳುವೆವೆಂದು ವಿನಯದಿಂದ ಬಾಗಿಬಿಟ್ಟರು.

ಹಾಗೆ ದಿಗ್ವಿಜಯ ಮಾಡಿಕೊಂಡು ರಾವಣನು ಒಂದು ಸಾರಿ ಹಿಮಾಲಯಕ್ಕೆ ಹೋಗಿ ಅಲ್ಲಿ ದೇವತಾಸ್ತ್ರೀಯಂತೆ ಕಾಣುವ ರೂಪವತಿಯೊಬ್ಬಳನ್ನು ನೋಡಿದನು. ಅವಳು ಮುನಿಗಳ ಹಾಗೆ ಕೃಷ್ಣಾಜಿನವನ್ನೂ, ಜಟಾವಲ್ಕಲಗಳನ್ನೂ ಧರಿಸಿ ತಪಸ್ಸಿನ ದೀಕ್ಷೆಯಲ್ಲಿ ಕುಳಿತುಕೊಂಡಿದ್ದಳು.

ರಾವಣನು ಅವಳನ್ನು ನೋಡುತ್ತಾ, ಅವಳ ಅತಿಶಯವಾದ ಸೌಂದರ್ಯದಿಂದ ಆಕರ್ಷಿತನಾಗಿ, ಮೋಹಪರವಶತೆಯಿಂದ ಅವಳ ಹತ್ತಿರ ಹೋಗಿ, "ಸುಂದರೀ ! ಈ ನವಯೌವನ ಪ್ರಾಯದಲ್ಲಿ ಹೀಗೆ ತಪಸ್ಸು ಮಾಡುವುದಂಟೆ ? ಏಕೆ ಈ ವೈರಾಗ್ಯ ? ನಿನ್ನ ಈ ಸೌಂದರ್ಯ ರಾಶಿಯನ್ನು ನೋಡಿ ಪುರುಷರು ಸಮ್ಮೋಹಿತರಾಗುತ್ತಾರೆ. ನಿನಗೇಕೆ ಈ ಕಠಿಣ ವ್ರತ ? ಇದನ್ನು ನೋಡಿ ನನಗೆ ಸಹಿಸಲಾಗುವುದಿಲ್ಲ" ಎಂದು ಹೇಳಿದನು.

ಅವಳು ಕಣ್ಣು ಬಿಡಿಸಿ ರಾವಣನನ್ನು ನೋಡಿ, ತಾನು ಯಾರು ಏನೆಂಬುದನ್ನೆಲ್ಲಾ ಹೇಳಿದಳು :

"ಬೃಹಸ್ಪತಿಯ ಮಗನಾದ ಶುಕಧ್ವಜನೆಂಬವರು ನನ್ನ ತಂದೆ. ನನ್ನ ಹೆಸರು ವೇದವತಿ. ಗಂಧರ್ವರೂ, ಯಕ್ಷರೂ, ರಾಕ್ಷಸರೂ ನನ್ನ ತಂದೆಯ ಬಳಿಗೆ ಬಂದು ನನ್ನನ್ನು ತಮಗೆ ಕೊಟ್ಟು ಮದುವೆ ಮಾಡುವಂತೆ ಕೇಳಿಕೊಂಡರು. ಆದರೆ ನನ್ನ ತಂದೆ ಅವರಾರನ್ನೂ ಒಪ್ಪಲಿಲ್ಲ. ಕಾರಣವೇನೆಂದರೆ, ಅವರಿಗೆ ವಿಷ್ಣುಮೂರ್ತಿಯನ್ನೇ ತನ್ನ ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದು ಅಪೇಕ್ಷೆಯಾಗಿತ್ತು. ಈ ಸಂಗತಿಯನ್ನು ತಿಳಿದು ದಂಡನೆಂಬ ಒಬ್ಬ ರಾಕ್ಷಸನು, ಒಂದು ದಿನ ರಾತ್ರಿ ತಂದೆ ನಿದ್ದೆಯಲ್ಲಿರುವಾಗ ಬಂದು ಅವರನ್ನು ಕೊಂದುಬಿಟ್ಟನು. ನನ್ನ ತಾಯಿ ತಂದೆಯೊಂದಿಗೇ ಸಹಗಮನ ಮಾಡಿದಳು. ನಾನು ನನ್ನ ತಂದೆಯ ಕೋರಿಕೆಯನ್ನು ಪೂರ್ತಿಗೊಳಿಸುವ ಉದ್ದೇಶದಲ್ಲಿ, ವಿಷ್ಣುವನ್ನೇ ನನ್ನ ಪತಿಯೆಂದು ಮನಸ್ಸಿನಲ್ಲಿ ಭಾವಿಸಿ ಅದೇ ಧ್ಯಾನದಲ್ಲಿ ತಪಸ್ಸು ಮಾಡಿಕೊಂಡಿದ್ದೇನೆ. ಇಷ್ಟೇ ನನ್ನ ಸಂಗತಿ. ತಿಳಿಯಿತಷ್ಟೇ ? ಆದುದರಿಂದ ರಾವಣಾ, ಇನ್ನು ಇಲ್ಲಿ ನಿಲ್ಲದೆ ಮಾತಾಡದೆ ಹೊರಟು ಹೋಗಿಬಿಡು."

ಆ ಮಾತುಗಳನ್ನು ಕೇಳಿ ರಾವಣನು ನಗುತ್ತ, ಅವಳ ತೀರ ಹತ್ತಿರಕ್ಕೆ ಹೋಗಿ, "ಬುದ್ಧಿಯಿಲ್ಲದ



ಮುಗ್ಧಬಾಲೇ! ಗರ್ವ ಬೇರೆ ತಲೆಗೇರಿ ನಿನ್ನ ಬುದ್ಧಿ ವಿಕಟವಾಗಿದೆ. ಇಲ್ಲದಿದ್ದರೆ ಜಗದೇಕ ಸುಂದರಿಯಾಗಿದ್ದು, ನಿನ್ನ ಯೌವನವನ್ನು ಹೀಗೆ ಹಾಳು ಮಾಡಿಕೊಳ್ಳುವಿಯಾ? ನೋಡಿಲ್ಲಿ, ದಶಗ್ರೀವನಾದ ನಾನು ಲಂಕಾಧೀಶ್ವರನಾಗಿದ್ದೇನೆ. ನೀನು ನನ್ನ ಹೆಂಡತಿಯಾಗಿ ಸಮಸ್ತ ಭೋಗಗಳನ್ನೂ ಅನುಭವಿಸುತ್ತ ಸೌಭಾಗ್ಯಶಾಲಿನಿಯಾಗಿರು. ದೀರ್ಘಾಯುಷಿಯಾದ ನನ್ನನ್ನು ವರಿಸಿ ದೀರ್ಘ ಸುಮಂಗಲಿಯಾಗಿರು. ನಿನ್ನ ಅದೃಷ್ಟ ಇಂದು ಕಣ್ಣು ತೆರೆಯಿತು ಅಂದುಕೋ. ವಿಧಿಯೇ ನಿನ್ನನ್ನು ಉದ್ಧರಿಸಲು ನನ್ನನ್ನು ಕಳುಹಿಸಿದನೆಂದು ನಂಬು" ಎನ್ನುತ್ತಾ ಮುಂದಡಿಯಿಟ್ಟನು.

"ಎಲೋ! ಗರ್ವಿಷ್ಠನೇ! ಯಾವ ಲೋಕದಲ್ಲಿರುವಿಯೋ? ನಿನಗೆ ಸ್ವಲ್ಪವಾದರೂ ಬುದ್ಧಿಯಿದ್ದರೆ ವಿಷ್ಣುವನ್ನು ಅಲಕ್ಷ್ಯಮಾಡಿ ಮಾತಾಡಲಾರೆ!" ಎಂದಳು ವೇದವತಿ.

ಕೂಡಲೇ ರಾವಣನು ಅವಳ ಜುಟ್ಟು ಹಿಡಿದು ಎಳೆದನು. ವೇದವತಿ ಕೋಪಾವೇಶದಿಂದ ತನ್ನ ಕೈಗಳನ್ನು ಕತ್ತಿಗಳ ಹಾಗೆ ಮಾಡಿ ತನ್ನ ಜುಟ್ಟನ್ನು ಕಡಿದುಕೊಂಡಳು. ತನ್ನ ಕೋಪಾಗ್ನಿಯಿಂದ ರಾವಣನನ್ನು ದಹಿಸುವಳೋ ಎಂಬಂತೆ ಕಾಣಿಸಿದಳು ವೇದವತಿ.

ಅವಳು ಉರಿಯುವ ಅಗ್ನಿಯ ನಡುವಿನಲ್ಲಿ ರಾವಣನನ್ನು ನೋಡಿ, "ನೀಚನೇ! ನಿನ್ನಿಂದ ಅವಮಾನ ಪಟ್ಟು ಇನ್ನು ಬದುಕಿರಲಾರೆ. ಈ ಅಗ್ನಿಯಲ್ಲಿ ನನ್ನ ಪಂಚಪ್ರಾಣಗಳನ್ನು ಬಿಟ್ಟು ನಿನ್ನನ್ನು ಕೊಲ್ಲಲು ಅಯೋನಿಜೆಯಾಗಿ, ಪತಿವ್ರತೆಯಾಗಿ ಹುಟ್ಟಿ ತೀರುತ್ತೇನೆ. ನಾನೇ ನಿನ್ನ ಮೃತ್ಯುವೆಂದು ತಿಳಿ!" ಎಂದು ಅಗ್ನಿಯಲ್ಲಿ ಸುಟ್ಟುಹೋದಳು.

ಆ ವೇದವತಿಯೇ ಭೂಮಿಯಲ್ಲಿ ಸೀತೆಯಾಗಿ ಹುಟ್ಟಿ, ಜನಕನ ಮನೆಯಲ್ಲಿ ಬೆಳೆದು ವಿಷ್ಣುವಿನ ಅವತಾರವಾದ ರಾಮಪತ್ನಿಯಾಗಿ ರಾಮನ ಕೈಯಲ್ಲಿ ರಾವಣನನ್ನು ಕೊಲ್ಲಿಸಿದಳು.

ಹೀಗೆ ವೇದವತಿ ಅಗ್ನಿಗೆ ಆಹುತಿಯಾಗಿ ಹೋದ ಮೇಲೆ ರಾವಣನು ಅವಳ ಕೋಪ ಶಾಪಗಳನ್ನೇನೂ ಲಕ್ಷ್ಯ ಮಾಡದೆ, ಪುಷ್ಪಕ ವಿಮಾನವನ್ನೇರಿ ಲೋಕ ಸಂಚಾರ ಮಾಡುತ್ತ, ಒಂದು ಕಡೆಯಲ್ಲಿ ಯಾವುದೋ ಮಹಾ ಯಜ್ಞ ನಡೆಯುವುದನ್ನು ನೋಡಿದನು.

ಅದು ಮರುತ್ತ ಮಹಾರಾಜನು ದೇವತೆಗಳನ್ನು ಹತ್ತಿರವಿರಿಸಿಕೊಂಡು ಮಾಡುತ್ತಿರುವ ಯಜ್ಞ. ಬೃಹಸ್ಪತಿಯ ತಮ್ಮನಾದ ಸಂವರ್ತನು ಮುಖ್ಯ ಪುರೋಹಿತನಾಗಿ ಯಜ್ಞ ಮಾಡಿಸುತ್ತಿದ್ದನು.

ರಾವಣನನ್ನು ನೋಡಿದ ಕೂಡಲೇ ಅಲ್ಲಿ ಸೇರಿದ್ದ ದಿಕ್ಪಾಲಕರು ಭಯಭ್ರಾಂತರಾಗಿ ತಮ್ಮ ಗುರುತು ತಿಳಿಯದಂತೆ ವೇಷ ಬದಲಾಯಿಸಿಕೊಂಡರು. ಇಂದ್ರನು ನವಿಲಿನ ರೂಪ ತಾಳಿದನು. ಯಮನು



ಕಾಗೆಯಾಗಿ ಮಾರ್ಪಟ್ಟನು. ಕುಬೇರನು ಓತಿಯಾದನು. ವರುಣನು ಹಂಸರೂಪ ತಾಳಿದನು. ಹಾಗೆಯೇ ಉಳಿದ ದೇವತೆಗಳು ಬೇರೆ ಬೇರೆ ಪ್ರಾಣಿಗಳ ಹಾಗೆ ಮಾರ್ಪಟ್ಟರು.

ರಾವಣನು ನಿಃಸಂಕೋಚದಿಂದ ಯಜ್ಞವಾಟಿಕೆಯೊಳಗೆ ಪ್ರವೇಶಿಸಿ ಮರುತ್ತ ರಾಜನನ್ನು ನೋಡಿ, "ಒಂದೇ ಮಾತು. ಈ ರಾವಣನೊಂದಿಗೆ ಯುದ್ಧ ಮಾಡುವಿಯಾ? ಸೋತೆನೆಂದು ಶರಣಾಗುವಿಯಾ? ಬೇಗ ಹೇಳು" ಎಂದು ಕೇಳಿದನು.

"ಎಂಥಾ ರಾವಣ ನೀನು?" ಎಂದು ಮರುತ್ತನು ರಾವಣನನ್ನು ಕೇಳಿದನು.

ರಾವಣನು ದೊಡ್ಡ ದನಿಯಿಂದ ನಾಲ್ಕು ಸುತ್ತಲೂ ಪ್ರತಿಧ್ವನಿಸುವಂತೆ ನಗುತ್ತ, "ಭೇಷ್! ದಶಗ್ರೀವ ರಾವಣನನ್ನು ಕೂಡಾ ನೀನು ಅರಿಯೆಯಾ! ನನ್ನ ಬಲ ಪರಾಕ್ರಮಗಳನ್ನು ತಿಳಿಯದವನು ಮೂರು ಲೋಕಗಳಲ್ಲಿ ಯಾರೂ ಇಲ್ಲವೆಂದುಕೊಂಡಿದ್ದೆ. ನೀನೊಬ್ಬ ಇರುವೆಯೆಂದಾಯಿತು. ನನ್ನ ಅಣ್ಣನನ್ನು ಜಯಿಸಿ ಈ ಪುಷ್ಪಕ ವಿಮಾನ ವಶಪಡಿಸಿಕೊಂಡಿದ್ದೇನೆ! ಈಗಾದರೂ ತಿಳಿಯಿತೇ? ಒಳ್ಳೆಯದರಲ್ಲಿ ಶರಣಾಗು" ಎಂದನು.

ಆ ಮಾತನ್ನು ಕೇಳಿ ಮರುತ್ತ ರಾಜನು ಕೋಪದಿಂದ ಕಿಡಿಕಿಡಿಯಾಗಿ "ತಂದೆಯಂಥ ಅಣ್ಣನನ್ನೇ ಜಯಿಸಿದ ಘನವಂತನೋ ನೀನು? ಬೆಂಕಿಹಚ್ಚಿತು ನಿನ್ನ ಘನವಂತಿಕೆಗೆ! ಛೀ ಛೀ! ಅಂತಹ ದುಷ್ಕೃತನ ಮಾಡಿದೆನೆಂದು ಗರ್ವಪಡುವಿಯೇನು? ನಿರ್ಲಜ್ಜನೇ! ನಿಲ್ಲು! ನನ್ನ ಬಾಣಗಳಿಂದ ನಿನ್ನ ಪ್ರಾಣ ತೆಗೆಯುತ್ತೇನೆ" ಎಂದು ಹೇಳಿ ಎದ್ದು ಧನುರ್ಬಾಣಗಳನ್ನು ತೆಗೆದುಕೊಂಡನು.

ಆಗ ಮರುತ್ತ ಮಹಾರಾಜನಿಗೆ ಸಂವರ್ತನು ಅಡ್ಡನಿಂತು, "ಅವರಸಪಡಬೇಡ. ನಾನು ಹೇಳುವುದನ್ನು ಸ್ವಲ್ಪ ಕೇಳು. ಈ ಮಹೇಶ್ವರ ಯಜ್ಞದ ಮಧ್ಯದಲ್ಲಿ ವಿಘ್ನ ಉಂಟಾದರೆ ವಂಶನಾಶನವಾಗುತ್ತದೆ. ಯಜ್ಞದೀಕ್ಷೆಯಲ್ಲಿರುವ ನೀನು ಕೋಪಿಸುವುದೂ ಯುದ್ಧಕ್ಕೆ ತಲೆಹಾಕುವುದೂ ಕ್ಷೇಮವಲ್ಲ. ಅಲ್ಲದೆ ಈ ಯುದ್ಧದಲ್ಲಿ ಈ ರಾಕ್ಷಸನನ್ನು ಜಯಿಸಲಾರೆ. ಇವನನ್ನು ಕೊಲ್ಲುವವರಾರೂ ಈಗ ಪ್ರಪಂಚದಲ್ಲಿಲ್ಲ. ಆದುದರಿಂದ ಇವನು ದುರ್ಜಯನು" ಎಂದನು.

ಗುರುವಿನ ಮಾತನ್ನು ಕೇಳಿ ಮರುತ್ತ ರಾಜನು ಧನುರ್ಬಾಣಗಳನ್ನು ಕೆಳಗೆ ಹಾಕಿ, ಮತ್ತೆ ಯಜ್ಞದೀಕ್ಷೆಯಲ್ಲಿ ಕುಳಿತನು. ಅದನ್ನು ನೋಡಿ ರಾವಣನ ಮಂತ್ರಿಯಾದ ಶುಕನು, "ರಾವಣನದೇ ಜಯ!" ಎಂದು ದೊಡ್ಡ ಧ್ವನಿಯಿಂದ ಕೂಗಿದನು.

ರಾವಣನು ಯಜ್ಞವಾಟಿಕೆಯಲ್ಲಿದ್ದ ಕೆಲವು ಋಷಿಗಳನ್ನು ಹಿಡಿದು ಮುರಿದು ಭಕ್ಷಿಸಿ ತೇಗಿ ತೃಪ್ತನಾಗಿ ಅಲ್ಲಿಂದ ತನ್ನ ಪುಷ್ಪಕ ವಿಮಾನವನ್ನೇರಿಕೊಂಡು ಹೊರಟು ಹೋದನು.



ಆಮೇಲೆ ದಿಕ್ಪಾಲಕರು ತಮ್ಮ ತಮ್ಮ ನಿಜ ರೂಪಗಳನ್ನು ಧರಿಸಿ ತಾವು ಯಾವ ಯಾವ ಪ್ರಾಣಿಗಳ ರೂಪಗಳನ್ನು ಧರಿಸಿದರೋ ಅವುಗಳಿಗೆ ಬೇರೆ ಬೇರೆ ವರಗಳನ್ನು ಕೊಟ್ಟರು. ಹಾಗೆಯೇ ಇತರ ದೇವತೆಗಳೂ ಮಾಡಿದರು.

ಅದುವರೆಗೆ ನವಿಲುಗಳು ಕಪ್ಪಗಿದ್ದುವು. ಇಂದ್ರನು ಅವುಗಳಿಗೆ ಅನೇಕ ಬಣ್ಣಗಳ ಚಂದ ಬರುವ ಹಾಗೆ ವರಕೊಟ್ಟನು, ತನ್ನ ಸಾವಿರ ಕಣ್ಣುಗಳೂ ಅವುಗಳ ಪಿಂಛಗಳಿಗೆ ಬರುವ ಹಾಗೆ ಅಲಂಕಾರ ಮಾಡಿ, ಅವುಗಳಿಗೆ ಹಾವುಗಳ ಭಯವಿಲ್ಲದಂತೆ ವರವಿತ್ತನು. ತಾನು ಸುರಿಸುವ ಮಳೆಗೆ ಅವುಗಳು ಸಂತೋಷಿಸುವಂತೆಯೂ ಹರಸಿದನು.

ಹಾಗೆಯೇ ಕಾಗೆಗಳಿಗೆ ಯಾವ ರೋಗವೂ ಇಲ್ಲದಂತೆ, ಹಾಗು ಸಹಜ ಮರಣವಿಲ್ಲದಂತೆ, ಅವುಗಳ ಹೊಟ್ಟೆ ತುಂಬಿದರೆ ತನ್ನ ಲೋಕದಲ್ಲಿರುವ ಪಿತೃದೇವತೆಗಳಿಗೆ ತೃಪ್ತಿಯಾಗುವಂತೆ ಯಮನು ವರವಿತ್ತನು.

ವರುಣನು ಹಂಸಗಳಿಗೆ ನೊರೆಯಂತಹ ದೇಹಕಾಂತಿಯನ್ನೂ ಜಲಜೀವನವು ಸುಖಪ್ರದವಾಗುವಂತೆಯೂ ವರವಿತ್ತನು. ಕುಬೇರನು ಓತಿಗಳನ್ನು ಬಂಗಾರದ ವರ್ಣದಿಂದ ಶೋಭಿಸುವಂತೆ ಮಾಡಿದನು. ಹೀಗೆ ಅನೇಕ ಪ್ರಾಣಿಗಳಿಗೆ ದೇವತೆಗಳಿಂದ ಉಪಕಾರವಾಯಿತು.

ರಾವಣನು ಲೋಕವನ್ನೆಲ್ಲಾ ತಿರುಗುತ್ತ, ಮರುತ್ತ ಮಹಾರಾಜನನ್ನು ಕೇಳಿದ ಹಾಗೆಯೇ ದೊಡ್ಡ ದೊಡ್ಡ ರಾಜರೆಲ್ಲರ ಬಳಿಗೂ ಹೋಗಿ "ನನ್ನೊಂದಿಗೆ ಯುದ್ಧ ಮಾಡುವಿರಾ? ಸೋತೆನೆಂದು ಶರಣಾಗುವಿರಾ?" ಎಂದು ಕೇಳುತ್ತಿದ್ದನು. ದುಷ್ಯಂತ, ಸುರದ, ಗಾದಿ, ಗಯ, ಪುರೂರವ ಮೊದಲಾದ ರಾಜರೆಲ್ಲಾ ರಾವಣನ ಮುಂದೆ ಸೋತೆವೆಂದು ಒಪ್ಪಿಕೊಂಡರು. ಅಯೋಧ್ಯೆಯನ್ನು ಪಾಲಿಸುತ್ತಿದ್ದ ಅನರಣ್ಯ ಮಹಾರಾಜನು ಮಾತ್ರ ಧೈರ್ಯದಿಂದ ರಾವಣನನ್ನು ಯುದ್ಧಕ್ಕೆ ಕರೆದನು.

ಆಗ ನಡೆದ ಯುದ್ಧದಲ್ಲಿ ಅನರಣ್ಯನ ಸೇನೆಗಳು ಕಾಡುಗಿಚ್ಚಿನಲ್ಲಿ ತಗಣೆಗಳು ಸತ್ತ ಹಾಗೆ ಸತ್ತು ಹೋದವು. ದ್ವಂದ್ವ ಯುದ್ಧದಲ್ಲಿ ಅನರಣ್ಯನ ಬಾಣಗಳು ರಾವಣನನ್ನು ಏನೂ ಮಾಡಲಾರದೆ ವ್ಯರ್ಥವಾದುವು. ರಾವಣನು ಅನರಣ್ಯನ ನೆತ್ತಿಗೊಂದು ಏಟು ಹಾಕಲು ಅವನು ರಥದಿಂದ ಕೆಳಗುರುಳಿ ಬಿದ್ದನು. ಅವನು ಪ್ರಾಣಬಿಡುತ್ತಾ ತನ್ನ ಇಕ್ಷ್ವಾಕು ವಂಶದಲ್ಲಿ ಹುಟ್ಟಲಿರುವವನ ಕೈಯಲ್ಲೇ ರಾವಣನು ಸಾಯುವಂತಾಗಲೆಂದು ಶಪಿಸಿದನು.

ಈ ಚಂದದಲ್ಲಿ ರಾವಣನು ಗಗನ ವಿಹಾರ ಮಾಡುತ್ತ, ಮಾನವ ಜಾತಿಯನ್ನು ತುಂಬಾ ಭಯಪಡಿಸುತ್ತ ತಿರುಗಿಕೊಂಡಿರುವಾಗ ಒಂದು ದಿನ ಅವನ ಪುಷ್ಪಕಕ್ಕೆ ಇದಿರಾಗಿ ನಾರದನು ಮೋಡಗಳ ಮೇಲಿಂದಾಗಿ ಬಂದು ನಿಂತನು.

"ಏನು ನಾರದಾ ?" ಎಂದು ರಾವಣನು ಅವನನ್ನು ಕೇಳಲು, ನಾರದನು, "ಅಪ್ಪಾ, ರಾವಣಾ, ನಿನ್ನ ಬಲಪರಾಕ್ರಮಗಳನ್ನು ನೋಡಿ ಬಹಳ ಸಂತೋಷಿಸುತ್ತೇನಪ್ಪಾ ! ಆದರೆ ಒಂದು ಮಾತ್ರ ನನಗೆ ಹಿಡಿಸಲಿಲ್ಲ. ದೇವತೆಗಳಿಂದ ಕೂಡಾ ಮರಣ ವಿಲ್ಲದಂತೆ ವರಪಡೆದ ನೀನು ಅಲ್ಪ ಜೀವಿಗಳಾದ ಮಾನವರ ಮೇಲೆ ಬಲ ಪರಾಕ್ರಮಗಳನ್ನು ತೋರಿಸುವುದೆಂದರೇನು ? ಮಾನವರು ಅನೇಕ ವ್ಯಸನಗಳಿಂದ, ರೋಗಗಳಿಂದ, ಕ್ಷಣ ಮಾತ್ರದಲ್ಲಿ ಸತ್ತು ಬೀಳುವ ವಾರ್ಧಕ್ಯದಿಂದ ಬಗೆಬಗೆಯ ಕಷ್ಟ ಗಳನ್ನು ಅನುಭವಿಸಿಕೊಂಡಿರುವವರಾಯಿತಷ್ಟೆ ? ಅವರನ್ನೆಲ್ಲ ಯಮನು ಕೊಲ್ಲುತ್ತಲೇ ಇರುತ್ತಾನೆ. ನೀನು ಯಮನೊಂದಿಗೇ ಯುದ್ಧಮಾಡಿ ಅವನನ್ನು ಕೊಂದುಬಿಡು. ಆ ಒಬ್ಬ ಯಮನನ್ನು ಕೊಂದು ಬಿಟ್ಟರೆ ಪರಲೋಕಗಳನ್ನೆಲ್ಲಾ ಜಯಿಸಿದ ಹಾಗೇ ಆಗಿಬಿಡುತ್ತದೆ !" ಎಂದು ಹೇಳಿದನು.

"ಅಯ್ಯಾ ನಾರದಾ, ನಾನು ಮೊದಲು ಸೌರಾ ಕಾಶವನ್ನೂ, ಆಮೇಲೆ ಸ್ವರ್ಗವನ್ನೂ ಜಯಿಸಿ, ಮೂರು ಲೋಕಗಳನ್ನೂ ಸ್ವಾಧೀನಪಡಿಸಿಕೊಂಡು, ಅನಂತರ ಸಮುದ್ರವನ್ನು ಮಥಿಸಿ ಅಮೃತವನ್ನು ಸಂಪಾದಿಸಬೇಕೆಂಬ ಆಲೋಚನೆಯಲ್ಲಿ ಇದ್ದೇನೆ ಗೊತ್ತಾ ?" ಎಂದನು ರಾವಣ.

"ಇಲ್ಲಿ ಸಮೀಪದಲ್ಲಿರುವ ಯಮಲೋಕವನ್ನು ಬಿಟ್ಟು ಇನ್ನೆಲ್ಲಿಗೋ ಹೋಗುವೆನೆನ್ನುವಿಯೇನಿದು ? ನೀನು ಈಗ ಹೋಗುವ ದಾರಿಯೇ ಯಮ ಲೋಕದ ದಾರಿ. ಆ ಕೆಲಸ ಮುಗಿಸಿಬಿಟ್ಟು, ಉಳಿದ ಕೆಲಸ ನೋಡಬಹುದಷ್ಟೆ ?" ಎಂದನು ನಾರದ.

ರಾವಣನು ಕಾಲಮೇಘವು ಮಿಂಚಿದಂತೆ ನಗಾಡಿ, "ಬಹಳ ಚೆನ್ನಾಗಿ ಹೇಳಿದೆಯೋ ನಾರದಾ. ಒಳ್ಳೆಯ ಸಂತೋಷಪ್ರದವಾದ ಮಾತು. ನಾನು ಈಗಲೇ ಯಮಲೋಕಕ್ಕೆ ಹೋಗುತ್ತೇನೆ, ದಿಕ್ಪಾಲಕರು ನಾಲ್ವರನ್ನೂ ಜಯಿಸುವೆನೆಂದು ಈ ಮೊದಲೇ ಪ್ರತಿಜ್ಞೆ ಮಾಡಿದ್ದೇನೆ. ಈಗ ಹೋಗಿ ಎಲ್ಲಾ ಪ್ರಾಣಿ ಗಳಿಗೂ ಮರಣಭಯವನ್ನುಂಟುಮಾಡುವ ಆ ಯಮನ ಪ್ರಾಣ ತೆಗೆಯುತ್ತೇನೆ" ಎಂದು ನಾರದನಿಗೆ ನಮಸ್ಕಾರ ಮಾಡಿ ಅಪ್ಪಣೆ ಪಡೆದುಕೊಂಡು ತನ್ನ ಮಂತ್ರಿಗಳೊಂದಿಗೆ ದಕ್ಷಿಣ ದಿಕ್ಕಿಗೆ ಹೊರಟನು.

ಎಲ್ಲಾ ಪ್ರಾಣಿಗಳನ್ನೂ ಕೊಲ್ಲುವ ಯಮನಿಗೆ ಹೇಗೆ ಸಾವು ಬರುತ್ತದೋ ಎಂದು ನಾರದನಿಗೆ ಅರ್ಥವಾಗಲಿಲ್ಲ.

ಆ ಯಮನನ್ನು ರಾವಣನು ಜಯಿಸುವ ಬಗೆ ಯನ್ನು ಕಣ್ಣಾರೆ ನೋಡಬೇಕೆಂದುಕೊಂಡು ಕುತೂಹಲಭರಿತನಾದ ನಾರದನು ಕೂಡಾ ಯಮ ಪಟ್ಟಣಕ್ಕೇ ಹೊರಟನು.





# ಸ್ವತಂತ್ರ ಚಿಂತನೆ

**ಹಿಂದೆ** ಮಯೂರಪುರವೆಂಬ ಗ್ರಾಮದಲ್ಲಿ ವಿಶ್ವನಾಥನೆಂಬೊಬ್ಬ ಬಡ ಹುಡುಗನಿದ್ದನು. ಅವನನ್ನು ಹೆತ್ತ ಕೂಡಲೇ ಅವನ ತಾಯಿ ಬಾಣಂತಿ ಕಾಯಿಲೆಯಿಂದ ಅಸು ನೀಗಿದ್ದಳು. ಅನಂತರ ಅವನಿಗೆ ಐದನೇ ವರ್ಷ ನಡೆಯುವಾಗ ತಂದೆಯೂ ಹಾವು ಕಡಿದು ತೀರಿಹೋದನು. ಹೀಗಾಗಿ ನಿರ್ಭಾಗ್ಯನಾದ ವಿಶ್ವನಾಥನು ಬುದ್ಧಿ ತಿಳಿಯದ ಚಿಕ್ಕ ವಯಸ್ಸಿನಲ್ಲಿಯೇ ಇತರರ ದಯೆಗೆ ಪಾತ್ರನಾಗಿ ಅನಾಥನೇ ಆಗಿಬಿಟ್ಟನು.

ಅದರ ಮೇಲೆ ಹುಟ್ಟುವಾಗಲೇ ತಾಯಿಯನ್ನು ಬಲಿ ತೆಗೆದುಕೊಂಡ ಅವನು ದುಷ್ಟ ಜಾತಕದವನೆಂದುಕೊಂಡು ದೂರದ ಬಂಧುಗಳಾರೂ ಅವನನ್ನು ಸೇರಿಸಿಕೊಳ್ಳಲಿಲ್ಲ. ಊರೊಳಗಿನ ದಯಾವಂತರು ಕೆಲವರು ಅವನ ಮೇಲೆ ಮನಸ್ಸು ಕರಗಿ ತಲಾ ಒಂದೊಂದು ಮುದ್ದೆ ಕೊಟ್ಟು ಅವನು ಬದುಕಿರುವಂತೆ ಮಾಡುತ್ತಿದ್ದರು. ಹೀಗೆ ಸಿಕ್ಕಿದಲ್ಲಿ ತಿಂದು, ಸಿಕ್ಕಿದಲ್ಲಿ ಮಲಗಿ ದಿನ ಕಳೆಯುತ್ತಿದ್ದನು.

ಆದರೆ ವಿಶ್ವನಾಥನು ಸುಮ್ಮನೆ ಮಾತ್ರ ಕುಳಿತುಕೊಳ್ಳುತ್ತಿರಲಿಲ್ಲ. ಸಾಧ್ಯವಾದಷ್ಟು ಅವರಿಗೂ ಇವರಿಗೂ ಸಹಾಯ ಮಾಡುವನು. ಯಾರು ಕರೆದರೂ ಬರುವನು. ಹೇಳಿದ ಕೆಲಸ ಮಾಡುವನು. ತನ್ನಿಂದ ಸಾಧ್ಯವಿಲ್ಲವೆಂಬ ಮಾತು ಅವನ ಬಾಯಿಯಿಂದ ಬರುತ್ತಿದ್ದಿಲ್ಲ. ಮಾಡಿದರೆ ಅಷ್ಟು ಕೊಡಿ ಇಷ್ಟು ಕೊಡಿ ಎಂದೂ ಕೇಳುತ್ತಿದ್ದಿಲ್ಲ. ಇಂತಹ ಅವನ ಚುರುಕುತನವು ಎಲ್ಲರನ್ನೂ ಮೆಚ್ಚಿಸುವಂತಿತ್ತು. ಮೊದಲು ಅವನಿಗೆ ಭಿಕ್ಷೆ ಹಾಕಿದವರೇ, ಅವನು ತಮಗೆ ಸಹಾಯ ಮಾಡಲು ಬರುವುದನ್ನು ನೋಡಿ ಪ್ರತಿಫಲವಾಗಿ ಒಳ್ಳೆಯ ತಿಂಡಿಕೊಡಲು ತೊಡಗಿದರು.

ಕಾಲಕ್ರಮದಲ್ಲಿ ಅವನು ದೊಡ್ಡವನಾದನು. ಮಯೂರಪುರ ಗ್ರಾಮದ ಹಿರಿಯನ ಹೆಸರು ಧರ್ಮದಾಸನೆಂದು. ಅವನಿಗೆ ವಿಶ್ವನಾಥನು ಅನೇಕ ಸಂದರ್ಭಗಳಲ್ಲಿ ಉಪಯೋಗಪಟ್ಟಿದ್ದನು. ಆದುದರಿಂದ ಧರ್ಮದಾಸನಿಗೆ ವಿಶ್ವನಾಥನ ಮೇಲೆ ಪ್ರತ್ಯೇಕ ಅಭಿಮಾನವಿದ್ದಿತು. ಕೆಲವರು ಅವನಿಂದ ಹೆಚ್ಚಿಗೆ ಕೆಲಸ ಮಾಡಿಸಿ, ತಕ್ಕ ಪ್ರತಿಫಲ ಕೊಡದೆ ಹೋಗುವುದೂ ಅವನಿಗೆ ಗೊತ್ತಾಗಿತ್ತು. ಇನ್ನು ಮೇಲೆ ಅವನು ಯಾರ ಮೇಲೆಯೂ ಆಧಾರಪಡದೆ,

ಎಸ್. ಶಿವನಾಗೇಶ್ವರರಾವ್



ಸ್ವತಂತ್ರವಾಗಿ ಜೀವಿಸಿಕೊಂಡಿರಲು ಏನಾದರೊಂದು ಏರ್ಪಾಡು ಮಾಡಬೇಕೆಂದು ಅವನಿಗೆ ತೋರಿತು.

ಅವನು ಒಂದು ದಿನ ವಿಶ್ವನಾಥನನ್ನು ಕರೆದು "ನಿನ್ನ ಒಳ್ಳೆಯತನವು ನನಗೆ ತುಂಬಾ ಹಿಡಿಸಿದೆ. ಆದುದರಿಂದಲೇ ನಿನಗೆ ಸಹಾಯ ಮಾಡುತ್ತೇನೆ. ನನ್ನ ಹಟ್ಟಿಯಿಂದ ನಿನಗೆ ಬೇಕಾದ ನಾಲ್ಕು ಎಮ್ಮೆಗಳನ್ನು ತೆಗೆದುಕೋ. ಅವುಗಳ ಹಾಲಿನಿಂದ ವ್ಯಾಪಾರ ಮಾಡಿದರೆ ನಿನ್ನ ಕಾಲ ಮೇಲೆ ನೀನು ನಿಲ್ಲಬಹುದು. ಇನ್ನೊಬ್ಬರ ದಯೆಗೆ ಕಾದುಕೊಂಡಿರಬೇಕಾಗಿಲ್ಲ. ನೀನು ಚೆನ್ನಾಗಿ ಸಂಪಾದಿಸಿ ಹಣ ಸೇರಿಸುವ ಶಕ್ತನಾದ ಮೇಲೆ ನನ್ನ ಎಮ್ಮೆಗಳ ಬೆಲೆಯನ್ನು ಕೊಡಬಹುದು" ಎಂದನು.

ವಿಶ್ವನಾಥನು ಅವನಿಗೆ ಕೃತಜ್ಞತೆ ಹೇಳಿ ಧರ್ಮದಾಸನ ಹಟ್ಟಿಯಿಂದ ಒಳ್ಳೆಯ ನಾಲ್ಕು ಎಮ್ಮೆಗಳನ್ನು ಹೊಡೆದುಕೊಂಡು ಹೋದನು. ಆಮೇಲೆ ಒಂದು ಒಳ್ಳೆಯ ದಿನ ನೋಡಿ ಹಾಲಿನ ವ್ಯಾಪಾರವನ್ನು ಮೊದಲು ಮಾಡಿದನು. ಅವನು ಒಳ್ಳೆಯ ಹಾಲನ್ನು ಸುಲಭ ಬೆಲೆಗೆ ಮಾರುತ್ತಿದ್ದನು. ಲಾಭದ ದೃಷ್ಟಿ ಅವನಿಗೆ ಇರಲೇ ಇಲ್ಲ.

ಆ ಊರಿನಲ್ಲಿ ಕಾಳಿಂಗನೆಂಬ ಹಾಲಿನ ವ್ಯಾಪಾರಿಯಿದ್ದನು. ಅವನು ಹಾಲಿಗೆ ಹೆಚ್ಚಾಗಿ ನೀರು ಬೆರೆಸಿ, ಹೆಚ್ಚಿನ ಬೆಲೆಗೆ ಮಾರುವುದರಲ್ಲಿ ಬಹಳ ಜಾಣನಾಗಿದ್ದನು.

ಅವನು ವಿಶ್ವನಾಥನ ಹಾಲಿನ ವ್ಯಾಪಾರ ನೋಡಿ, ಅಯ್ಯೋ ಎಂದುಕೊಂಡು ಒಂದು ದಿನ ವಿಶ್ವನಾಥನ ಬಳಿಗೆ ಬಂದು, "ಇದೆಂತ ವ್ಯಾಪಾರ ನಿನ್ನದು? ನಾವು ಮಾಡುವುದು ವ್ಯಾಪಾರ. ವ್ಯಾಪಾರದಲ್ಲಿ ಲಾಭವೇ ಮುಖ್ಯವಪ್ಪೆ? ನೀನು ಹೀಗೆ ಒಳ್ಳೆಯ ದಪ್ಪ ಹಾಲನ್ನು ಕಡಿಮೆ ಬೆಲೆಗೆ ಮಾರುವುದರಿಂದ ಲಾಭವೇನೂ ಬಾರದೆ, ಎಮ್ಮೆಗಳನ್ನೂ ಸಾಕಿ ನೀನೂ ಉಂಡು ದಿನಗಳೆಯುವುದು ಕಷ್ಟ. ಹೀಗಿರುವಾಗ ಧರ್ಮದಾಸರ ಹಣ ಅವರಿಗೆ ಹೇಗೆ ಕೊಡುತ್ತಿ? ಆದುದರಿಂದ ಹಾಲಿಗೆ ನೀರು ಬೆರೆಸು. ಬೆಲೆಯನ್ನೂ ಸ್ವಲ್ಪ ಹೆಚ್ಚಿಸು. ಏನೂ ಪರ್ವಾಗಿಲ್ಲ" ಎಂದು ವ್ಯಾಪಾರದ ಪದ್ಧತಿಯನ್ನು ವಿವರಿಸಿದನು.

ಅವನ ಮಾತು ಕೇಳಿ ವಿಶ್ವನಾಥನು, "ನನ್ನ ಈ ಊರಿನವರೆಲ್ಲರೂ ನನ್ನವರೇ ಎಂದುಕೊಂಡಿದ್ದೇನೆ. ಹಾಗಿರುವಾಗ ಹಾಲಿಗೆ ನೀರು ಬೆರೆಸಿ ಮಾರಿದರೆ ನನ್ನನ್ನು ನಾನು ಮೋಸಪಡಿಸಿಕೊಂಡಂತೆಯೇ ಆಗುತ್ತದೆ. ಸತ್ಯಪ್ರಾಮಾಣಿಕವಾಗಿಯೇ ವ್ಯಾಪಾರ ಮಾಡಿಕೊಂಡಿರುತ್ತೇನೆ. ಬಂದಷ್ಟೇ ಲಾಭ ಸಾಕು. ಸ್ವಂತ ಕಷ್ಟದಿಂದ ದಿನಗಳೆಯುತ್ತೇನೆಂಬ ತೃಪ್ತಿಯೊಂದಿದೆಯಲ್ಲ. ಧರ್ಮದಾಸರಿಗೆ ಹಣಕ್ಕೆ ಅವಸರವೇನೂ ಇಲ್ಲ" ಎಂದನು ವಿಶ್ವನಾಥ.

ಒಂದು ದಿನ ಕ್ಷೇಮೇಂದ್ರನೆಂಬವನು ತನ್ನ ಮನೆಯ ಮುಂದೆ ಕುಳಿತು ವಿಶ್ರಾಂತಿ ಪಡೆದುಕೊಂಡಿದ್ದನು. ಆಗ ವಿಶ್ವನಾಥನು ಆ ದಾರಿಯಾಗಿ ಹೋಗುವು

ದನ್ನು ಅವನು ನೋಡಿದನು. ಕ್ಷೇಮೇಂದ್ರನ ಮಗಳಿಗೆ ಮದುವೆ ನಡೆದ ಸಂದರ್ಭದಲ್ಲಿ ವಿಶ್ವನಾಥನು ಅವನಿಗೆ ವಿಶೇಷ ಸಹಾಯ ಮಾಡಿದ್ದನು. ಅಂತಲೇ ಕ್ಷೇಮೇಂದ್ರನು ಅವನನ್ನು ಹತ್ತಿರ ಕರೆದು, "ನೀನೀಗ ಏನೋ, ವ್ಯಾಪಾರ ಮಾಡುವುದಾಗಿ ಕೇಳಿದೆನು. ಹೇಗೆ ನಡೆಯುತ್ತದೆ ? ಒಳ್ಳೆಯ ಸ್ಥಿತಿಯಲ್ಲಿರುವೆಯಾ ?" ಎಂದು ವಿಚಾರಿಸಿದನು.

"ಅದೇನು ಹೇಳಲಿ ಸ್ವಾಮೀ ! ಹಾಲಿನಿಂದ ಬರುವ ಆದಾಯಕ್ಕಿಂತಲೂ ಎಮ್ಮೆಗಳ ಮೇವಿನ ಖರ್ಚೇ ಹೆಚ್ಚಾಗಿದೆ. ಏನು ಮಾಡಬೇಕೆಂದು ಗೊತ್ತಾಗುವುದಿಲ್ಲ. ಹೇಗೋ ದಿನ ಹೋಗುತ್ತದೆ" ಎಂದನು ವಿಶ್ವನಾಥ.

ಅದಕ್ಕೆ ಕ್ಷೇಮೇಂದ್ರನು "ಹಾಲಿನ ವ್ಯಾಪಾರವು ಲಾಭಕರವಾಗಿಲ್ಲದಿದ್ದರೆ, ನನ್ನ ಮನೆಯ ಮುಂದಿರುವ ಖಾಲೀ ಜಾಗದಲ್ಲಿ, ಓಳೀ ತೆಗೆದು ತರಕಾರಿ ಬೆಳೆಸು. ಪಕ್ಕದ ಕೆರೆಯಲ್ಲಿ ಬೇಕಾದಷ್ಟು ನೀರೂ ಇದೆ. ಸ್ವಲ್ಪ ಕಷ್ಟಪಡಬೇಕಾದೀತು. ಕಷ್ಟಕ್ಕೆ ನೀನು ಹೆದರುವವನಲ್ಲವೆಂದು ನನಗೆ ಗೊತ್ತು" ಎಂದು ಸಲಹೆ ಮಾಡಿದನು.

ಆ ಕೆಲಸ ಆಗಬಹುದೆಂದು ವಿಶ್ವನಾಥನಿಗೆ ತೋರಿತು. ಆಗಲೇ ಅವನು ಧರ್ಮದಾಸನ ಬಳಿಗೆ ಹೋಗಿ, "ಅಯ್ಯಾ, ಹಾಲಿನ ವ್ಯಾಪಾರವು ಅಷ್ಟೇನೂ ಲಾಭದಾಯಕವಾಗಿಲ್ಲ. ನಿಮ್ಮ ಎಮ್ಮೆಗಳನ್ನು ನಿಮಗೇ ಒಪ್ಪಿಸಿಬಿಡುತ್ತೇನೆ. ನನ್ನನ್ನು ಕ್ಷಮಿಸಿರಿ" ಎಂದನು.

ಹಾಗೆ ಅವನು ಎಮ್ಮೆಗಳನ್ನು ಧರ್ಮದಾಸನ ಹಟ್ಟಿಯಲ್ಲಿ ತಂದು ಕಟ್ಟಿ, ಕ್ಷೇಮೇಂದ್ರನು ತೋರಿಸಿದ ಖಾಲೀ ಜಾಗದಲ್ಲಿ ವಿಶ್ವನಾಥನು ಬಗೆಬಗೆಯ ತರಕಾರಿಗಳಿಗಾಗಿ ಓಳೀ ತೆಗೆದನು. ಬೇಕಾದ್ದೆಲ್ಲಾ ಮಾಡಿದನು. ಬೇಗದಲ್ಲೇ ಅವನ ತರಕಾರಿಗಳ ವ್ಯಾಪಾರವು ಪ್ರಾರಂಭವಾಯಿತು. ಒಳ್ಳೊಳ್ಳೆಯ ತರಕಾರಿಗಳನ್ನು ನ್ಯಾಯವಾದ ಬೆಲೆಗೇ ಮಾರುತ್ತಿದ್ದನು. ಬೇರೆ ಕಡೆಗಳಿಗಿಂತ, ಅವನ ತರಕಾರಿಗಳ ಬೆಲೆ ಅಗ್ಗವೇ. ಆದ್ದರಿಂದ ವ್ಯಾಪಾರ ಮುಗಿಯಲು ಕಾಯಬೇಕಾಗಿರಲಿಲ್ಲ.





ಅದನ್ನು ಗಮನಿಸಿದ ಚಕ್ರಧರನೆಂಬ ಇನ್ನೊಬ್ಬ ತರಕಾರೀ ವ್ಯಾಪಾರಿ ವಿಶ್ವನಾಥನ ಹತ್ತಿರ ಬಂದು, "ನೀನು ಒಳ್ಳೊಳ್ಳೆಯ ತರಕಾರಿಗಳನ್ನು ಆರಿಸಿ ಮಾರಾಟ ಮಾಡುತ್ತೀ. ಆದ್ದರಿಂದ ಅವುಗಳನ್ನು ಹೆಚ್ಚಿನ ಬೆಲೆ ಹೇಳಿ ಮಾರಬೇಕಪ್ಪಾ. ಇಲ್ಲದಿದ್ದರೆ ಹುಳಹಿಡಿದದ್ದು ಬಾಡಿದ್ದು ಕೂಡಾ ಬೆರೆಸಿ ಎಲ್ಲರೂ ಮಾರುವ ಬೆಲೆಗೆ ಮಾರು. ಮುಖ್ಯವಾಗಿ ವ್ಯಾಪಾರದಲ್ಲಿ ಇರಬೇಕಾದದ್ದು ಲಾಭದ ದೃಷ್ಟಿ. ಪ್ರಾಮಾಣಿಕತೆಯೆಲ್ಲಾ ಅನಂತರದ್ದು. ಅದಕ್ಕಾಗಿ ಯಾರೂ ತಪ್ಪು ಹೇಳಲಾರರು" ಎಂದನು.

ಅದನ್ನು ಕೇಳಿ ವಿಶ್ವನಾಥನು, "ದಿಕ್ಕಿಲ್ಲದ ನನ್ನನ್ನು ಈ ಊರಿನವರು ಪ್ರೇಮಾಭಿಮಾನದಿಂದ ಆದರಿಸಿ ಬೆಳೆಸಿದ್ದಾರೆ. ಅವರಾರೂ ಲಾಭದ ಆಶೆಯಿಂದ ನನ್ನನ್ನು ಬೆಳೆಸಲಿಲ್ಲ. ಅಂಥವರಿಂದ ನಾನೇನು ಲಾಭವನ್ನು ಆಶಿಸಲಿ? ಹೇಗೆ ಆಶಿಸಲಿ? ನಾನು ಪ್ರಾಮಾಣಿಕನಾಗಿರುವುದರಿಂದಲೇ ಈ ಸ್ಥಿತಿಯಲ್ಲಿದ್ದೇನೆ. ಒಳ್ಳೆಯವರು ನನ್ನ ಮೇಲೆ ಅಭಿಮಾನದಿಂದಿದ್ದಾರೆ" ಎಂದನು.

ವಿಶ್ವನಾಥನ ತರಕಾರೀ ವ್ಯಾಪಾರವು ಕೂಡಾ ಅಷ್ಟಷ್ಟರಲ್ಲೇ ನಡೆಯುತ್ತಿತ್ತು.

ಹಾಗಿರುವಾಗ ಸಭಾಪತಿಯೆಂಬ ಹೂಗಳ ವ್ಯಾಪಾರದವನು ವಿಶ್ವನಾಥನನ್ನು ಕರೆದು "ನೋಡಪ್ಪಾ, ನಾನು ಮುದುಕನಾಗಿಬಿಟ್ಟೆ. ಈ ಹೂಗಳ ವ್ಯಾಪಾರ ನನ್ನಿಂದ ಸಾಧ್ಯವಾಗುವುದಿಲ್ಲ. ನನ್ನ ಮಗಂದಿರೆಲ್ಲ ಬೇರೆ ವ್ಯಾಪಾರದಲ್ಲಿ ಸ್ಥಿರಪಟ್ಟಿದ್ದಾರೆ. ನಿನಗೆ ನಂಬುಗೆಯಿದ್ದರೆ ನನ್ನ ಹೂವಿನ ವ್ಯಾಪಾರ ನಿನಗೇ ಕೊಡುತ್ತೇನೆ. ಸೊಗಸಾಗಿ ವ್ಯಾಪಾರ ಮಾಡಿಕೊಂಡಿರು" ಎಂದನು.

ವಿಶ್ವನಾಥನು ತರಕಾರೀ ವ್ಯಾಪಾರವನ್ನು ಬಿಟ್ಟು ಹೂಗಳ ವ್ಯಾಪಾರವನ್ನು ತೊಡಗಿದನು. ಅವನು ಬಾಡಿದ, ಹರಿದ, ಒಣಗಿದ ಹೂಗಳನ್ನು ಹೆಕ್ಕಿ ಒಳ್ಳೊಳ್ಳೆಯ ಹೂಗಳನ್ನೇ ಹತ್ತಿರ ಹತ್ತಿರವಾಗಿ ಮಾಲೆಕಟ್ಟಿ ಮಾರಲು ತೊಡಗಿದನು. ಇತರರು ನಾಲ್ಕು ಮಾಲೆ ಮಾಡುವ ಹೂಗಳಿಂದ ಇವನು ಮೂರೇ ಮಾಲೆ ಮಾಡುತ್ತಿದ್ದನು.

ಇದನ್ನು ಗಮನಿಸಿದ ಸಭಾಪತಿ, "ನೀನು ಮಾಡುವ ಈ ಬಗೆಯ ಪದ್ಧತಿಯಲ್ಲಿ ಲಾಭ ಬಾರದಪ್ಪಾ. ಒಳ್ಳೆ ಹೂಗಳ ನಡುವೆ ಬಾಡಿದ್ದು ಹರಿದದ್ದು ಸಹಾ ಸೇರಿಸಿ ಸಡಿಲಾಗಿ ಮಾಲೆಕಟ್ಟಿ ಮಾರಬೇಕು. ನೀನು ಕಟ್ಟುವ ಒಂದು ಮಾಲೆಯಲ್ಲಿ ಎರಡಾಗುತ್ತದೆ ಗೊತ್ತಾ?" ಎಂದನು.

ಅದಕ್ಕೆ ವಿಶ್ವನಾಥನು, "ನಾನೊಬ್ಬ ಒಂಟಿ ಮನುಷ್ಯ. ಹೇಗಾದರೂ ಬದುಕುತ್ತೇನೆ ಬಿಡಿ. ಹಾಗಿರುವಾಗ ನನ್ನ ಊರಿನವರನ್ನು ಏಕೆ ಮೋಸ ಪಡಿಸಲಿ?" ಎಂದನು.

ವಿಶ್ವನಾಥನಿಗೆ ಹೂಗಳ ವ್ಯಾಪಾರದಲ್ಲಿ ಕೂಡಾ ಶ್ರಮಕ್ಕೆ ತಕ್ಕ ಫಲಿತ ಸಿಗಲಿಲ್ಲ. ಸಭಾಪತಿಯು

ಮೂಲಕ ಅವನ ಸಂಗತಿಯನ್ನು ತಿಳಿದ ಜ್ಞಾನಗುಪ್ತನೆಂಬ ಪ್ರಮುಖ ವ್ಯಾಪಾರಿ, ಸ್ವತಃ ವಿಶ್ವನಾಥನ ಹತ್ತಿರ ಬಂದು, "ವಿಶ್ವನಾಥಾ, ಬಹಳ ದಿನಗಳಿಂದ ನಿನ್ನನ್ನು ಗಮನಿಸುತ್ತಿದ್ದೇನೆ. ನಿನ್ನ ಪ್ರಾಮಾಣಿಕತೆ ನನಗೆ ತುಂಬಾ ಹಿಡಿಸಿದೆ. ನಿನ್ನನ್ನು ನನ್ನ ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದಿದ್ದೇನೆ. ನೀನು ಸರಿಯೆಂದರೆ ನನ್ನ ಕುಮಾರಿಯನ್ನು ವಿವಾಹ ಮಾಡಿಕೋ. ವರದಕ್ಷಿಣೆಯಾಗಿ ನನ್ನದೊಂದು ಜೀನಸಿನ ಅಂಗಡಿಯನ್ನು ನಿನಗೇ ಕೊಡುತ್ತೇನೆ" ಎಂದನು.

ವಿಶ್ವನಾಥನು ಅದಕ್ಕೆ ತನ್ನ ಅಂಗೀಕಾರವನ್ನು ತಿಳಿಸಿದನು.

ಈ ಸಂಗತಿಯನ್ನು ತಿಳಿದು ಕಾಳಿಂಗ, ಚಕ್ರಧರ, ಸಭಾಪತಿಗಳಿಗೆ ಆಶ್ಚರ್ಯವಾಯಿತು. ಜ್ಞಾನಗುಪ್ತನಂತಹ ಪ್ರಮುಖ ವ್ಯಾಪಾರಿ, ತನ್ನ ಮಗಳನ್ನೇ ವಿಶ್ವನಾಥನಿಗೆ ಕೊಡುವುದುಂಟೆ?

ಅವರು ಜ್ಞಾನಗುಪ್ತನನ್ನು ಸಂಧಿಸಿ, ತಾವು ಕೇಳಿದ ಸಮಾಚಾರವನ್ನು ಹೇಳಿ, "ಈ ಸಮಾಚಾರ ನಿಜವೇನು ? ವಿಶ್ವನಾಥನಲ್ಲಿ ವ್ಯಾಪಾರ ದಕ್ಷತೆಯೇ ಇಲ್ಲ. ನೀವು ಅವನಿಗೆ ಒಪ್ಪಿಸುವ ಅಂಗಡಿಯಲ್ಲಿ ನಷ್ಟದ ಹೊರತು ಲಾಭ ಸಂಪಾದಿಸಲು ಅದನಿಂದ ಆಗದು. ಅವನು ಪ್ರಾಮಾಣಿಕನು ನಿಜವಾದರೂ ಅಮಾಯಕನು" ಎಂದರು.

"ವಿಶ್ವನಾಥನು ನೀವು ಹೇಳುವಂತೆ ಪ್ರಾಮಾಣಿಕನೇ ಹೌದು. ಆದರೆ ಅಮಾಯಕನೇನೂ ಅಲ್ಲ. ಮುಂದೆ ನಿಮಗೇ ಗೊತ್ತಾಗುತ್ತದೆ" ಎಂದು ಜ್ಞಾನಗುಪ್ತನು ಅವರಿಗೆ ಹೇಳಿದನು.

ಆಮೇಲೆ ಜ್ಞಾನಗುಪ್ತನ ಕುಮಾರಿಯೊಂದಿಗೆ ವಿಶ್ವನಾಥನಿಗೆ ಮದುವೆಯಾಯಿತು. ವೈಭವದಿಂದಲೇ ನಡೆಯಿತು ಮದುವೆ. ವಿಶ್ವನಾಥನು ಜೀನಸಿನ ಅಂಗಡಿಯ ವ್ಯಾಪಾರದ ಬಾಧ್ಯತೆ ವಹಿಸಿಕೊಂಡದ್ದೂ ಆಯಿತು. ಅವನ ಪ್ರಾಮಾಣಿಕತೆಯನ್ನು ಅರಿತಿದ್ದ ಊರ ಜನರು ತಮಗೆ ಬೇಕಾದ ವಸ್ತುಗಳನ್ನು ಅವನ ಅಂಗಡಿಯಲ್ಲೇ ಕೊಂಡುಕೊಳ್ಳತೊಡಗಿದರು. ಕ್ರಮವಾಗಿ ವಿಶ್ವನಾಥನ ವ್ಯಾಪಾರದಲ್ಲಿ ನಷ್ಟವು



ಕಾಣತೊಡಗಿತು. ಅವನಿಗೆ ಒಬ್ಬ ಮಗನು ಹುಟ್ಟಿದನು. ಅಳಿಯನು ವ್ಯಾಪಾರದಲ್ಲಿ ನಷ್ಟಕ್ಕೆ ಗುರಿಯಾಗುತ್ತಿದ್ದಾನೆಂದು ತಿಳಿದು ಜ್ಞಾನಗುಪ್ತನು ಅವನಿಗೆ ಧನಸಹಾಯ ಮಾಡುವ ಗೊಡವೆಗೆ ಹೋಗಲಿಲ್ಲ.

ವಿಶ್ವನಾಥನ ಹೆಂಡತಿ ಅವನಿಗೆ ವ್ಯಾಪಾರದಲ್ಲಿ ಸರಕುಗಳನ್ನು ತರಲಿಕ್ಕಾಗಿ ತನ್ನ ಶರೀರದ ನಗಗಳನ್ನು ತೆಗೆದುಕೊಡುತ್ತ "ಇನ್ನು ಮೇಲೆ ಅಪ್ಪನಿಂದ ನಿಮಗೆ ಯಾವ ಧನಸಹಾಯವೂ ಬಾರದು. ಮೊದಲೇನೋ ನೀವು ಒಬ್ಬಂಟಿಗರಾಗಿದ್ದಿರಿ. ಈಗ ಮಗುವಿನೊಂದಿಗೆ ನಾವು ಮೂವರಾಗಿದ್ದೇವೆ. ಪ್ರಾಮಾಣಿಕನಾದವನು ವ್ಯಾಪಾರದಲ್ಲಿ ಲಾಭ ಗಳಿಸಲಾರನೆನ್ನುವುದು ಸರಿಯಲ್ಲ. ಇನ್ನೊಬ್ಬರ ಒಳಿತನ್ನು ನೋಡುವುದರ ಹೊರತು ತನ್ನ ಒಳಿತನ್ನು ನೋಡದವರು ಮಾತ್ರ ನಷ್ಟಕ್ಕೆ ಬೀಳುತ್ತಾರೆ" ಎಂದು ಹೇಳಿದಳು.

ಹೆಂಡತಿಯ ಮಾತುಗಳನ್ನು ಕೇಳಿ ವಿಶ್ವನಾಥನು ಆಶ್ಚರ್ಯಪಡುತ್ತ, "ಅಂದರೆ ನಾನು ಪರರ ಒಳಿತನ್ನು ಬಿಟ್ಟು, ಸ್ವಾರ್ಥ ಚಿಂತನೆಯಿಂದ ವ್ಯಾಪಾರ ಮಾಡಬೇಕು ಅನ್ನುವಿಯಾ? ಹಾಗೆ ಮಾಡಿದರೆ ನನ್ನ ಪ್ರಾಮಾಣಿಕತನ ಏನಾದೀತು?" ಎಂದನು ಚಿಂತಿತನಾಗಿ.

ಆ ಸಮಯದಲ್ಲಿ ಮನೆಯೊಳಗೆ ಬರುತ್ತ ಆ ಗಂಡಹೆಂಡಿರ ಸಂಭಾಷಣೆಯನ್ನು ಕೇಳಿದ ಜ್ಞಾನಗುಪ್ತನು, "ವಿಶ್ವನಾಥಾ, ಇವಳು ಹೇಳುವುದು ನೀನು ಪ್ರಾಮಾಣಿಕತೆ ಬಿಟ್ಟು ಸ್ವಾರ್ಥಿಯಾಗಬೇಕೆಂದಲ್ಲ. ವ್ಯಾಪಾರದಲ್ಲಿ ಲಾಭ ಸಂಪಾದಿಸಬೇಕಾದರೆ ಕಲಬೆರಿಕೆ, ತಪ್ಪು ತೂಕಗಳು ಮಾತ್ರ ಶರಣ್ಯವೆಂದಲ್ಲ. ಹಾಗೆಂದು ನೀನು ಮಾಡುವ ರೀತಿಯಲ್ಲಿ ಲಾಭದ ವಿಷಯ ಮರೆತುಬಿಡುವುದೂ ಅಲ್ಲ. ಕೊಂಡುಕೊಂಡ ಸರಕುಗಳ ಮೇಲೆ ನ್ಯಾಯವಾದ ಸ್ವಲ್ಪ ಲಾಭದ ಲೆಕ್ಕವಿಟ್ಟು ಚಿಲ್ಲರೆಯಾಗಿ ವ್ಯಾಪಾರ ಮಾಡು. ಅದು ನಾಲ್ಕು ಮಂದಿ ಒಪ್ಪಿಕೊಳ್ಳುವಂಥಾ ಲಾಭವಾದುದರಿಂದ ಪ್ರಾಮಾಣಿಕತೆಗೆ ಭಂಗವಿಲ್ಲ. ಆಗ ನಿನಗೇ ಎಲ್ಲಾ ಗೊತ್ತಾಗುತ್ತದೆ" ಎಂದನು.

ವಿಶ್ವನಾಥನು ಅದಕ್ಕೆ ಒಪ್ಪಿಕೊಳ್ಳುವಂತೆ ತಲೆಯಾಡಿಸಿದನು. ಜ್ಞಾನಗುಪ್ತನು ಸರಕುಗಳನ್ನು ಕೊಳ್ಳಲು ಸ್ವಲ್ಪ ಧನವನ್ನೂ ಕೊಟ್ಟನು. ಆಮೇಲೆ ವಿಶ್ವನಾಥನು ಇತರ ವರ್ತಕರಂತೆ ಹೆಚ್ಚಿನ ದುರಾಶೆಗೆ ಹೋಗದೆ ಸ್ವಲ್ಪ ಬೆಲೆ ಹೆಚ್ಚಿಸಿ ವ್ಯಾಪಾರಕ್ಕೆ ತೊಡಗಿದನು. ಇತರ ವರ್ತಕರ ಅಂಗಡಿಯೊಂದಿಗೆ ಹೋಲಿಸಿದರೆ ವಿಶ್ವನಾಥನ ಅಂಗಡಿಯ ಬೆಲೆ ಕಡಿಮೆಯೇ ಆಗಿ, ವಸ್ತುಗಳು ಒಳ್ಳೆಯವೂ ಆಗಿ ವ್ಯಾಪಾರವು ಚೆನ್ನಾಗಿ ಸಾಗಿತು.






ಆದಿತ್ಯಸೇನನೆಂಬ ರಾಜನ ಆಸ್ಥಾನದಲ್ಲಿ ಅನೇಕ ಮಂದಿ ಉದ್ಯೋಗಸ್ಥರಿದ್ದರು. ರಾಜನ ಮುಂದೆ ಎಷ್ಟೋ ಬಗೆಯ ವ್ಯವಹಾರಗಳು ಬರುತ್ತಿದ್ದುವು. ಆಗ ಯಾವುದೊಂದು ಸಣ್ಣ ಸಂಗತಿ ನಡೆದರೂ ಸಾಕು. ಆಸ್ಥಾನದ ಉದ್ಯೋಗಸ್ಥರು ರಾಜನನ್ನು ಅಂಥವನಿಂಥವನೆಂದು ಮುಖಸ್ತುತಿ ಮಾಡುತ್ತಿದ್ದರು. ಕೆಲವು ಸಾರಿ ಆ ಹೊಗಳಿಕೆಯ ಮಾತುಗಳು ರಾಜನನ್ನು ಬೇಸರ ಬಿಡುತ್ತಿದ್ದುವು. ಅಂತಹ ಹೊಗಳಿಕೆಯ ಮಾತುಗಳು ಸಹಜವಾಗಿ ಹೊರಡುವಂಥವಲ್ಲವೆಂದು ರಾಜನಿಗೆ ಗೊತ್ತಿದ್ದಿತು.

ಒಂದು ದಿನ ರಾತ್ರಿ ತಾಳಲಾಗದಷ್ಟು ಚಳಿ ಹರಡಿಕೊಂಡಿತ್ತು. ಅಂತಹ ಚಳಿಯಲ್ಲಿ ಆದಿತ್ಯಸೇನ ರಾಜನು ರಾಜಭವನವನ್ನು ಬಿಟ್ಟು ಹೊರಗೆ ಹೊರಟನು. ಎಲ್ಲಿಯಾದರೂ ಮುಖಸ್ತುತಿ ಮಾಡದೆ ಸತ್ಯ ಹೇಳುವ ಪ್ರಾಮಾಣಿಕನಾದವನನ್ನು ನೋಡಬೇಕೆಂದು ಅವನ ಆಸೆ.

ರಾಜನು ಮೈತುಂಬ ಶಾಲುವೆ ಹೊದೆದುಕೊಂಡು ಬೀದಿಯಲ್ಲಿ ನಡೆಯುತ್ತಿದ್ದನು. ಸ್ವಲ್ಪ ದೂರ ಹೋದ ಮೇಲೆ, ಒಂದು ಬೀದಿಯ ಬದಿಯ ಮನೆಯ ಜಗಲಿಯಲ್ಲಿ ಮುದುಡಿ ಮಲಗಿದ್ದ ಮನುಷ್ಯನೊಬ್ಬನನ್ನು ಅವನು ನೋಡಿದನು. ರಾಜನಿಗೆ ಅವನಲ್ಲಿ ಏನೋ ಕುತೂಹಲವೆದ್ದಿತು.

ಆದಿತ್ಯಸೇನನು ಅವನ ಹತ್ತಿರ ಹೋಗಿ, "ಹೀಗೆ ಮಲಗಿದ್ದಿಯಲ್ಲಾ ? ನಿನಗೆ ಚಳಿಯಾಗುವುದಿಲ್ಲವೇನು ?" ಎಂದು ಕೇಳಿದನು.

ಆದಕ್ಕೆ ಅವನು, "ನಾನು ಹೊದೆದುಕೊಂಡಿರುವುದು ಹರಕು ವಸ್ತ್ರ. ಆದ್ದರಿಂದ ಚಳಿಗಾಳಿ ಒಂದು ಹರಕಿನೊಳಗೆ ನುಸುಳಿ ಮತ್ತೊಂದು ಹರಕಿನೊಳಗಿನಿಂದ ಹೊರಗೆ ಹೋಗುತ್ತದೆ. ಆದರೆ ಚಳಿಗಾಳಿ ನೀವು ಹೊದೆದುಕೊಂಡಿದ್ದ ಶಾಲುವೆಯೊಳಗೆ ಹೊಕ್ಕಿತೋ ತಿರುಗಿಹೋಯಿತು. ಮತ್ತೆ ಅದಕ್ಕೆ ಹೊರಗೆ ಹೋಗುವ ಅವಕಾಶವೇ ಇಲ್ಲ. ಆದ್ದರಿಂದಲೇ ನೀವು ಚಳಿಯನ್ನು ತಡೆದುಕೊಳ್ಳಲಾಗದೆ ನಡುಗುವಿರಿ. ನನಗೆ ತಡೆದುಕೊಳ್ಳಲು ಸಾಧ್ಯವಾಗುತ್ತದೆ!" ಎಂದನು.

ಅವನ ಹಾಸ್ಯ ಧೋರಣೆಯ ಮಾತು ಕೇಳಿ ರಾಜನಿಗೆ ನಗು ಬಂದಿತು, ಅವನು ಆ ಮನುಷ್ಯನೊಂದಿಗೆ "ನನ್ನ ಹತ್ತಿರ ನೂರು ಬಂಗಾರದ ನಾಣ್ಯ

ಬಿ. ಆರ್. ನಂದ

ಗಳಿವೆ. ಅವುಗಳಲ್ಲಿ ಇಪ್ಪತ್ತನ್ನು ನಿನಗೆ ಕೊಡುತ್ತೇನೆ. ನನ್ನನ್ನು ಮಹಾರಾಜನಂಥವನೆಂದು ಹೊಗಳ ಬಲ್ಲೆಯಾ ? " ಎಂದು ಕೇಳಿದನು.

ಕೇವಲ ಇಪ್ಪತ್ತು ನಾಣ್ಯಗಳಿಗಾ ? ಇಷ್ಟು ಚಿಕ್ಕ ಮೊತ್ತಕ್ಕೆ ಅಷ್ಟು ದೊಡ್ಡದಾಗಿ ಹೊಗಳಲು ಸಾಧ್ಯ ವಾಗದು " ಎಂದನು ಜಗಲಿಯವನು.

"ಒಂದು ವೇಳೆ ನನ್ನ ಹತ್ತಿರ ಇರುವುದರಲ್ಲಿ ಅರ್ಧಪಾಸಿ ಕೊಟ್ಟರೆ?" ಎಂದು ಪ್ರಶ್ನಿಸಿದನು ರಾಜ.

"ಆಗ ನಾವಿಬ್ಬರೂ ಸಮಾನರಾಗಿ ಬಿಡುತ್ತೇವೆ. ನಿಮ್ಮನ್ನು ಹೆಚ್ಚಿನವರೆಂದು ಹೊಗಳುವ ಅಗತ್ಯವೇ ಹೋಗಿಬಿಡುತ್ತದೆ" ಎಂದನಾ ಬಡಮನುಷ್ಯ.

ಆದಿತ್ಯಸೇನ ರಾಜನಿಗೆ ಅವನ ಉತ್ತರಗಳು ಬಹಳ ಸಂತೋಷವನ್ನುಂಟುಮಾಡಿದುವು. ತಾನೀಗ ಮಾತಾಡದೆ ಹೊರಟು ಹೋದರೆ ಧನದ ಆಶೆಯಿಂದ ಅವನು ಕರೆಯುವನೋ ನೋಡ ಬೇಕೆಂದುಕೊಂಡು ರಾಜನು ಮಾತಾಡದೆ ಮುಂದೆ ನಡೆದನು.

ಆದರೆ ಬಡವನು ಅವನನ್ನು ಕರೆಯಲಿಲ್ಲ. ರಾಜನು ತಿರುಗಿ ಅವನ ಹತ್ತಿರ ಬಂದನು.

"ಅಯ್ಯಾ, ತಾವು ಮತ್ತೇನೋ ಪ್ರಶ್ನೆ ಕೇಳ ಬೇಕೆಂದು ನನ್ನ ಹತ್ತಿರ ಬಂದ ಹಾಗಿದೆ ?" ಎಂದನು ಆ ಬಡವ.

"ಪ್ರಶ್ನಿಸಲಿಕ್ಕೆ ಅಲ್ಲ, ನಿನ್ನಿಂದ ಹೊಗಳಿಸಿಕೊಳ್ಳ ಲಿಕ್ಕೇ ಬಂದೆನು. ನನ್ನ ಹತ್ತಿರ ನೂರು ಬಂಗಾರದ ನಾಣ್ಯಗಳಿವೆಯೆಂದು ಹೇಳಿದ್ದೇನಷ್ಟೆ ?" ಎಂದನು ರಾಜ. "ಹೌದು" ಎಂದನು ಬಡವ.

"ಸರಿ, ಆ ನೂರು ಬಂಗಾರದ ನಾಣ್ಯಗಳನ್ನೂ ನಿನಗೆ ಕೊಡುತ್ತೇನೆ. ಆಗ ನನ್ನನ್ನು ಮಹಾರಾಜನಂಥವ ನೆಂದು ಹೊಗಳುವೆಯಷ್ಟೆ ?" ಕೇಳಿದನು ರಾಜ.

"ಅಯ್ಯಾ, ಆ ಬಂಗಾರದ ನಾಣ್ಯಗಳೆಲ್ಲಾ ನನ್ನದೇ ಆಗಿಬಿಟ್ಟರೆ ಆಮೇಲೆ ನಿಮ್ಮನ್ನು ಹೊಗಳಬೇಕಾದ ಅಗತ್ಯವಾದರೂ ಏನಿದೆ ? ಬೇಕಾದರೆ ನೀವೇ ನಿಮ್ಮ ಅಗತ್ಯಗಳಿಗಾಗಿ ನನ್ನನ್ನು ಹೊಗಳಬಹುದು. ಏಕೆಂದರೆ ನಿಮ್ಮ ಅಗತ್ಯಕ್ಕೆ ನಾನು ಕೊಟ್ಟರೆ ಉಂಟು !" ಎಂದು ಹೇಳಿ ನಗತೊಡಗಿದನು ಆ ಬಡವ.

ಆದಿತ್ಯಸೇನ ರಾಜನೂ ಅವನೊಂದಿಗೆ ಬಾಯಿ ತುಂಬಾ ನಕ್ಕನು.

ಅನಂತರ ರಾಜನು ಆ ಬಡ ಮನುಷ್ಯನಿಗೆ ನೂರು ಬಂಗಾರದ ನಾಣ್ಯಗಳನ್ನೂ ಕೊಟ್ಟು, ಅವನನ್ನು ತನ್ನ ಅಂತರಂಗದ ಸಲಹಾದಾರನನ್ನಾ ಗಿಯೂ ಇರಿಸಿಕೊಂಡನು.

ಹೀಗೆಲ್ಲಾ ನಡೆದುದನ್ನು ತಿಳಿದು ರಾಜಾಸ್ಥಾನದ ಉದ್ಯೋಗಸ್ಥರು ಅಂದಿನಿಂದ ಮಾತು ಮಾತಿಗೂ ರಾಜನನ್ನು ಹೊಗಳುವುದನ್ನು ಬಿಟ್ಟುಬಿಟ್ಟರು.



# ಕಳ್ಳ

ಅವಂತೀ ರಾಜನಿಗೆ ರಾಜ್ಯಾಕಾಂಕ್ಷೆ ವಿಪರೀತವಾಗಿತ್ತು. ನೆರೆಹೊರೆಯ ರಾಜರೊಂದಿಗೆ ಅನೇಕ ಯುದ್ಧಗಳನ್ನು ಮಾಡುತ್ತಿದ್ದನು.

ಯುದ್ಧಗಳ ಕಾರಣದಿಂದಾಗಿ ವ್ಯಾಪಾರಸ್ಥರಲ್ಲಿ ವಿಪರೀತ ಅನ್ಯಾಯಗಳು ತುಂಬಿದುವು. ಪ್ರಕೃತಿಯ ಕಾರಣಗಳೇನಿಲ್ಲದೆಯೇ ದೇಶದಲ್ಲಿ ಕ್ಷಾಮ ಬಂದಿತು.

ಆಹಾರಧಾನ್ಯಗಳ ಕೊರತೆಯಿಂದಾಗಿ ದೇಶದಲ್ಲಿ ಕಳ್ಳತನಗಳು ಹೆಚ್ಚಾದುವು. ಯಾವನೋ ಒಬ್ಬ ಕಳ್ಳ ರಾಜನ ಧನಾಗಾರಕ್ಕೆ ಕನ್ನ ಕೊರೆದು, ಸಿಕ್ಕಿಬಿದ್ದನು.

"ಅವನನ್ನು ಬಿಟ್ಟುಬಿಡಿರಿ" ಎಂದನು ಮಂತ್ರಿ ಭಟರನ್ನು ನೋಡಿ.

ಕಳ್ಳನು ಅವನ ಪಾಡಿಗೆ ಹೊರಟುಹೋದ ಮೇಲೆ, ರಾಜನು ಮಂತ್ರಿಯೊಂದಿಗೆ ಕಳ್ಳನನ್ನು ಏಕೆ ಬಿಟ್ಟಿರೆಂದು ಕೇಳಿದನು.

"ಕ್ಷಮಿಸಿರಿ ಪ್ರಭೂ. ಅವನು ಕಳ್ಳತನ ಮಾಡಿದನಾದರೂ, ಅಂತಹ ಪರಿಸ್ಥಿತಿಗೆ ಕಾರಣ ನಾವೇ!" ಎಂದನು ಮಂತ್ರಿ.

ಆ ಮಾತಿನಿಂದ ರಾಜನಿಗೆ ಬುದ್ಧಿ ಬೆಳಗಿತು. ಯುದ್ಧದ ಗೊಡವೆ ಬಿಟ್ಟು, ಶಾಂತಿ ಭದ್ರತೆಗಳನ್ನು ಕಾಪಾಡಲು ತೊಡಗಿದನು.





# ಗಟ್ಟಿಗ ಹೊಗಳು ಭಟ್ಟ

ಒಂದಾನೊಂದು ಕಾಲದಲ್ಲಿ ಒಂದು ಊರಿನಲ್ಲಿದ್ದ ವೆಂಕಣ್ಣಭಟ್ಟನೆಂಬವನು ಬಹು ದೊಡ್ಡ ಹೊಗಳು ಭಟ್ಟನಾಗಿದ್ದನು. ಆಡುವ ಮಾತುಗಳಲ್ಲಿ ಬಹಳ ಚಾಕಚಕ್ಯತೆಯನ್ನು ತೋರಿಸುತ್ತಿದ್ದನು. ಗ್ರಾಮದಲ್ಲಿ ಎಲ್ಲಿಯಾವ ಶುಭ ಸಮಾರಾಧನೆಗಳು ನಡೆದರೂ ವೆಂಕಣ್ಣಭಟ್ಟನು ಅಲ್ಲಿಗೆ ಹೋಗಿ ಕೂಡಿದವರನ್ನು ಹೊಗಳುತ್ತ, ಪದ್ಯಗಳನ್ನು ಕೂಡಾ ಹಾಡಿ ಅವರನ್ನು ಸಂತೋಷಪಡಿಸುವನು. ಸಂತೋಷಪಟ್ಟವರು ಅವನಿಗೆ ಬಹುಮಾನ ಕೊಡುತ್ತಿದ್ದರು. ಈ ಬಗೆಯ ಬಹುಮಾನಗಳಿಂದಲೇ ಅವನ ಜೀವನ ನಡೆಯುತ್ತಿತ್ತು. ಅದು ಹೊಗಳುಭಟ್ಟರ ಕಾಲ. ಶುಭ ಕಾರ್ಯಗಳಲ್ಲಿ ಹೊಗಳುವುದು ವಾಡಿಕೆಯಲ್ಲಿತ್ತು.

ಸಾಧಾರಣವಾಗಿ ಊರಿನವರೆಲ್ಲಾ ಅವನಿಗೆ ಅಷ್ಟೋ ಇಷ್ಟೋ ಕೊಟ್ಟವರೇ, ಕೊಡುವವರೇ. ಆದರೆ ಆ ಊರಿನ ಅಧಿಪತಿಗಳಾದ ಜಮೀನ್ದಾರರು ಮಾತ್ರ ವೆಂಕಣ್ಣಭಟ್ಟನಿಗೆ ಒಂದೇ ಒಂದು ಚಿಕ್ಕಾಸು ಕೂಡಾ ಕೊಡುವ ಪಾಪಕ್ಕೋ ಪುಣ್ಯಕ್ಕೋ ಹೋದವರಲ್ಲ. ಜಮೀನ್ದಾರರ ಮನೆಯಲ್ಲಿ ಶುಭಕಾರ್ಯ ನಡೆದಾಗಲೆಲ್ಲಾ ವೆಂಕಣ್ಣಭಟ್ಟನು ಹೋಗಿ ಶ್ಲಾಘನೆಯ ಮಾತುಗಳನ್ನೂ, ಪದ್ಯಗಳನ್ನೂ ಹೇಳುವನು. ಆದರೆ ಮಹಾ ಜಿಪುಣರಾದ ಜಮೀನ್ದಾರರು, ಪ್ರತಿ ಸಾರಿಯೂ, "ಆಹಾ! ಬಹಳ ಚೆನ್ನಾಗಿ ಕೀರ್ತಿ ಪದ್ಯ ಹೇಳಿದೆ. ಇದಕ್ಕಾಗಿ ನಿನಗೆ ಪ್ರತ್ಯೇಕವಾಗಿ ಒಳ್ಳೆಯ ಬಹುಮಾನ ಕೊಡಬೇಕು. ಮುಂದಿನ ವಿಶೇಷ ನಡೆಯುವಾಗ ಬರುವೆಯಷ್ಟೆ? ಆಗ ನೋಡೋಣ!" ಎನ್ನುತ್ತಿದ್ದರು.

ಆದರೆ ಜಮೀನ್ದಾರರಲ್ಲಿ ಅನೇಕ ಶುಭಕಾರ್ಯಗಳು ನಡೆದರೂ ವೆಂಕಣ್ಣಭಟ್ಟನಿಗೆ ಏನೂ ಗಿಟ್ಟಲಿಲ್ಲ.

ಹಾಗಿರುವಾಗ ಜಮೀನ್ದಾರರ ಮಗಳಿಗೆ ವಿವಾಹದ ಯೋಗ ಕೂಡಿಬಂತು, "ಇದು ದೊಡ್ಡ ಶುಭ ಕಾರ್ಯ. ಈ ಸಾರಿ ಜಮೀನ್ದಾರರ ಕೈಯಿಂದ ದೊಡ್ಡ ಬಹುಮಾನ ಪಡೆದುಕೊಂಡೇ ತೀರಬೇಕು" ಎಂದು ವೆಂಕಣ್ಣಭಟ್ಟನು ನಿಶ್ಚಯಿಸಿಕೊಂಡನು. ಅವನ ಮನೆಯಲ್ಲಿ ಒಳ್ಳೆಯ ದನವಿಲ್ಲದೆ ಹಾಲಿಗೆ ಬಹಳ ಕಷ್ಟಪಡುತ್ತಿದ್ದನು..

ಈ ಸಾರಿ ಹೇಗಾದರೂ ಮಾಡಿ ಜಮೀನ್ದಾರರಿಂದ ಒಳ್ಳೆಯದೊಂದು ದನವನ್ನು ಬಹುಮಾನ ಪಡೆಯದೆ ಬಿಡಬಾರದೆಂದುಕೊಂಡನು.

ವೆಂಕಣ್ಣಭಟ್ಟನು ಜಮೀನ್ದಾರರ ಮನೆಯ ಮದುವೆಗೆ ಹೋಗಿ, ಬಂಧುಮಿತ್ರರೊಂದಿಗೆ ಜಮೀನ್ದಾರರು ಮಂಡಿಸಿದ್ದ ಸಮಯ ನೋಡಿ, ವಧೂ ವರರಿಗೆ ಆಶೀರ್ವಾದ ಮಾಡುವವನಂತೆ, ಶ್ಲೋಕಗಳನ್ನೂ, ವಚನಗಳನ್ನೂ, ಪದ್ಯಗಳನ್ನೂ ಉಚ್ಚರಿಸಿ, "ಧರ್ಮದಾತರಾದ ಜಮೀನ್ದಾರರು ಈ ಶುಭ ಮಂಗಳ ಕಾರ್ಯ ಕಾಲದಲ್ಲಿ ಅವರೆಲ್ಲರ ಮನೋಭೀಷ್ಟ ಸಿದ್ಧ್ಯರ್ಥವಾಗಿ ಈ ದೀನನ ಸಣ್ಣ ಮನೋಭೀಷ್ಟ ಕೂಡಾ ಸಿದ್ಧಿಸುವುದಾಗಿತ್ತ ಭರವಸೆಯನ್ನು ಈಡೇರಿಸುವಂತೆ ಭಗವಂತನು ಅನುಗ್ರಹಿಸಲಿ!" ಎಂದನು.

ಬಂಧುಮಿತ್ರರ ಮಧ್ಯದಲ್ಲಿ ಈ ಸಾರಿ ತಪ್ಪಿಸಿಕೊಳ್ಳಲಾಗದ ಪರಿಸ್ಥಿತಿ ಬಂದುದರಿಂದ ಜಮೀನ್ದಾರರು "ಭೇಷ್! ಭೇಷ್! ಏನು ನಿನ್ನ ಮನೋಭೀಷ್ಟ?" ಎಂದು ವೆಂಕಣ್ಣಭಟ್ಟನನ್ನು ಕೇಳಿದರು.

"ಮಕ್ಕಳು ಮರಿಗಳ ಬಡ ಕುಟುಂಬಸ್ಥನು ನಾನು. ಕರೆಯುವ ದನವನ್ನು ಕೊಡಿಸಿದರೆ ನಾವೆಲ್ಲಾ ತಮ್ಮ ಹೆಸರು ಹೇಳಿಕೊಂಡು ಸಂತೋಷದಿಂದ್ದೇವು" ಎಂದನು ವೆಂಕಣ್ಣಭಟ್ಟ.

ಜಮೀನ್ದಾರರು ಒಬ್ಬ ನೌಕರನನ್ನು ಕರೆದು ಅವನ ಕಿವಿಯಲ್ಲಿ ಗುಟ್ಟಾಗಿ, ಒಂದು ದನದ ಗುರುತನ್ನು ಹೇಳಿ "ಅದನ್ನು ತಂದು ಇವನಿಗೆ ಕೊಟ್ಟುಬಿಡು" ಎಂದರು. ನೌಕರನು ಹೋಗಿ ಒಂದು ದನವನ್ನು ತಂದು ಜಮೀನ್ದಾರರ ಮುಂದೆ ನಿಲ್ಲಿಸಿದನು. ಅದು ಮುದಿ ದನವಾಗಿತ್ತು! ಅದನ್ನು ನೋಡಿ ಬಂದ ಅತಿಥಿಗಳಿಗೆಲ್ಲಾ ಆಶ್ಚರ್ಯವಾಯಿತು. ವೆಂಕಣ್ಣಭಟ್ಟನು ಏನು ಹೇಳುವನೋ ಎಂದು ಎಲ್ಲರಿಗೂ ಒಂದು ಬಗೆಯ ಕುತೂಹಲ.

ವೆಂಕಣ್ಣಭಟ್ಟನು ಇಕ್ಕಟ್ಟಿಗೆ ಸಿಕ್ಕಿಬಿದ್ದನು. ಅದನ್ನು ತೆಗೆದುಕೊಂಡು ಹೋಗುವುದರಿಂದ ಯಾವ ಪ್ರಯೋಜನವೂ ಇಲ್ಲ. ತೆಗೆದುಕೊಳ್ಳದೇ ಹೋದರೆ ಜಮೀನ್ದಾರರನ್ನು ಅವಮಾನಪಡಿಸಿದಂತಾಗುತ್ತದೆ. ಆ ಮುದಿ ದನವನ್ನು ನಿರಾಕರಿಸಲು ಅವನಿಗೊಂದು ಉಪಾಯ ಹೊಳೆಯಿತು.



ಅವನು ಆ ದನದ ಹತ್ತಿರ ಹೋಗಿ ಅದರ ಕಿವಿಯಲ್ಲಿ ಏನೋ ಹೇಳಿದಂತೆ ಬಾಯಾಡಿಸಿ, ಅದರ ಮುಖದ ಮುಂದೆ ತನ್ನ ಕಿವಿಯನ್ನಿಟ್ಟು, ಅದು ಹೇಳುವುದನ್ನು ಕೇಳುವಂತೆ ಅಭಿನಯಿಸತೊಡಗಿದನು. ಅದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು.

"ದನದೊಂದಿಗೆ ಅದೇನು ಗುಸುಗುಸು ವೆಂಕಣ್ಣ ಭಟ್ಟಾ?" ಎಂದು ಜಮೀನ್ದಾರರು ಎಗತಾಳಿಯಾಗಿ ಕೇಳಿದರು.

"ಮತ್ತೇನಿಲ್ಲ, ಮಹಾಪ್ರಭೂ! ನಾನು ಈ ದನದ ಹತ್ತಿರ ಇದರ ಮಹತ್ವವನ್ನು ತಿಳಿಯಲು ಗಬ್ಬ ಧರಿಸುವಿಯಾ? ಅಂತ ಕೇಳಿದೆ, ಅಷ್ಟೇ" ಎಂದನು ವೆಂಕಣ್ಣಭಟ್ಟ.

"ದನ ಏನು ಹೇಳಿತು?" ಎಂದರು ಜಮೀನ್ದಾರರು ನಗುತ್ತಾ.

"ಇದು ಏನು ಹೇಳಿತೆಂದರೆ, ನಾನು ಕೃತಯುಗದಲ್ಲಿ ಮಹಿಷಾಸುರನ ಹತ್ತಿರ ಇದ್ದವಳು. ಮಹಿಷಾಸುರನು ಆದಿಶಕ್ತಿಯಿಂದ ಅಂತ್ಯ ಹೊಂದಿದನು. ಕೃತಯುಗವು ಅಂತ್ಯವಾದರೂ ನಾನು ಸಾಯಲಿಲ್ಲ. ತ್ರೇತಾಯುಗವು ಬಂತು, ರಾವಣನು ಹುಟ್ಟಿ ರಾಮನ ಕೈಯಲ್ಲಿ ಸಾಯುವುದನ್ನು ಕೂಡಾ ನೋಡಿದೆ. ಆಮೇಲೆ ದ್ವಾಪರ ಯುಗದಲ್ಲಿ ಕಂಸನು ಹುಟ್ಟಿದ. ಕೃಷ್ಣನು ಬಂದು ಕಂಸನನ್ನು ಕೊಲ್ಲುವುದನ್ನು ಕೂಡಾ ನಾನು ಕಣ್ಣಾರೆ ನೋಡಿದ್ದೇನೆ. ಆದರೂ ನನಗೆ ಸಾವು ಬರಲಿಲ್ಲ. ಈಗ ಯಾವುದರ ಮೇಲೆಯೂ ನನಗೆ ಆಸಕ್ತಿ ಇಲ್ಲ. ಬಹಳ ವೈರಾಗ್ಯದಲ್ಲಿ ಜಮೀನ್ದಾರ್ರ ಆಶ್ರಯದಲ್ಲಿದ್ದೇನೆ. ಜಮೀನ್ದಾರ್ರ ಗೋಶಾಲೆಯಲ್ಲಿರುವುದೆಲ್ಲಾ ನನ್ನ ಸಂತಾನಗಳೇ. ಅಂಥ ನನ್ನನ್ನು ನೋಡಿ ಗಬ್ಬ ಧರಿಸುವಿಯಾ? ಎಂದು ಕೇಳಿ ನನ್ನನ್ನು ಅವಮಾನ ಪಡಿಸುವಿಯಾ? ಎನ್ನುತ್ತದೆ ಈ ಮಹಾ ಗೋಮಾತೆ!" ಎಂದನು ವೆಂಕಣ್ಣಭಟ್ಟ.

ಆವನ ಮಾತು ಕೇಳಿ ಅಲ್ಲಿ ಸೇರಿದವರೆಲ್ಲಾ ಗಲಗಲನೆ ನಕ್ಕರು. ಹತ್ತು ಮಂದಿಯ ಮುಂದೆ ಜಮೀನ್ದಾರರ ಮುಖ ಸಣ್ಣದಾಯಿತು. ಆದರೂ ಸಮಾಳಿಸಿಕೊಂಡು ನೌಕರನನ್ನು ನೋಡಿ, "ಬುದ್ಧಿಯಿಲ್ಲ ನಿನಗೆ? ಒಳ್ಳೆಯ ದನವನ್ನು ತಾರೆಂದರೆ ಇದನ್ನೇ ತರುವುದು? ಇದನ್ನೊಯ್ದು ಒಳ್ಳೇ ಪ್ರಾಯದ ದನವನ್ನು ತಾರೋ!" ಎಂದರು ಕೋಪದ ಅಧಿಕಾರವಾಣಿಯಲ್ಲಿ.

ನೌಕರನು ಆ ಮುದಿ ದನವನ್ನು ತೆಗೆದುಕೊಂಡು ಹೋಗಿ, ಒಳ್ಳೆಯ ದನವನ್ನು ತಂದನು. ವೆಂಕಣ್ಣಭಟ್ಟನು ಮತ್ತೆ ನಾಲ್ಕು ಹೊಗಳು ಪದ್ಯಗಳನ್ನು ಹಾಡಿ, ಆ ದನವನ್ನು ಸಂತೋಷದಿಂದ ತೆಗೆದುಕೊಂಡು ಹೋದನು.

